# SRI DHARMASTAL

## SARVA DHARMA SAMMELAN

# *Silver Jubilee Souvenir*



# ಶ್ರೀ ಧರ್ಮಸ್ಥಳ

## ಸರ್ವ ಧರ್ಮ ಸಮ್ಮೇಲನ

# ರಜತೋತ್ಸವ ಸ್ಮಾರಕ ಗ್ರಂಥ

ಶ್ರೀ ಧರ್ಮಸ್ಥಳ

ಸರ್ವಧರ್ಮ ಸಮ್ಮೇಲನ

# ರಜತೋತ್ಸವ ಸ್ಮಾರಕ ಗ್ರಂಥ

೧೯೫೭



1957

SRI DHARMASTALA

SARVA DHARMA SAMMELAN

# SILVER JUBILEE SOUVENIR

PUBLISHED BY:

K. V. SHENOY, "PRABHAT",

MANGALORE-1.

# ಶ್ರೀ ಧರ್ಮಸ್ಥಳ
## ಸರ್ವಧರ್ಮ ಸಮ್ಮೇಲನ
# ರಜತೋತ್ಸವ ಸ್ಮಾರಕ ಗ್ರಂಥ

೧೯೫೭



1957

## SRI DHARMASTALA
### SARVA DHARMA SAMMELAN
# SILVER JUBILEE SOUVENIR

PUBLISHED BY:
K. V. SHENOY, "PRABHAT",
MANGALORE-1.

[Rs. 3/-

Printed at the MANGALORE PRESS, Mangalore-1.



ತೀರ್ಥಂಕರ ಮಹಾವೀರ ವರ್ಧಮಾನ.

(ದಿವಂಗತ ಶ್ರೀ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರ ಕಲಾಕೃತಿಗಳಲ್ಲೊಂದು)



ಸಾಲಂಕೃತ ಶ್ರೀ ಮಂಜುನಾಥ ಸ್ವಾಮಿ ವಿಗ್ರಹ. ಶ್ರೀ ಧರ್ಮಸ್ಥಳ.

The idol of Sri Manjunath Swamy, Sri Dharmastal



ಶ್ರೀ ಮಂಜುನಾಥ ದೇವಾಲಯದೊಳಗೆ ಶ್ರೀ ಗಣಪತಿಯ ಗುಡಿ, ಶ್ರೀ ಧರ್ಮಸ್ಥಳ.
The Shrine of Sri Ganapathi inside Sri Manjunatha Swamy Temple, Dharmastal.



ಬೀಡಿನೊಳಗೆ, ಶ್ರೀಮಾನ್ ಹೆಗ್ಗಡೆಯವರು ನಿತ್ಯಪೂಜಿಸುವ ದೇವರ ಮಂದಿರ
The Shrine inside the Beedu, where Heggades pray every day.



ದಿವಂಗತ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರು,
ಶ್ರೀ ಚಂದ್ರನಾಥ ಸ್ವಾಮಿ ಬಸದಿಯಲ್ಲಿ ಪ್ರಾರ್ಥಿಸುತ್ತಿರುವಾಗ.
Late D. Manjayya Heggade inside Sri Chandranath Swamy Basadi.



1956ನೇ ಮೇ ತಿಂಗಳಲ್ಲಿ ಶ್ರೀ ಶೃಂಗೇರಿ ಜಗದ್ಗುರುಗಳವರು ಧರ್ಮಸ್ಥಳಕ್ಕೆ ಆಗಮಿಸಿದಾಗ, ಶ್ರೀ ರತ್ನವರ್ಮ ಹೆಗ್ಗಡೆಯವರು ಅವರನ್ನು ದೇವಾಲಯದೊಳಗೆ ಕರೆದೊಯ್ಯುವುದು.

ಶ್ರೀ ಧರ್ಮಸ್ಥಳದಲ್ಲಿ ಶ್ರೀ ಶೃಂಗೇರಿ ಜಗದ್ಗುರುಗಳವರ ಅಡ್ಡಪಲ್ಲಕ್ಕಿ ಮೆರವಣಿಗೆ (1956ನೇ ಮೇ).

ಮೈಸೂರಿನ ಮುಖ್ಯ ಮಂತ್ರಿ ಶ್ರೀ ನಿಜಲಿಂಗಪ್ಪನವರು ಶ್ರೀ ಧರ್ಮಸ್ಥಳಕ್ಕೆ ಭೇಟಿಯಿತ್ತಾಗ ಅವರನ್ನು ಕಲಶ ಸಹಿತ ಎದುರ್ಗೊಂಡು ಕರೆತರುವುದು.

Sri S. Nijalingappa, Chief Minister of Mysore visiting Dharmastala, being welcomed.

ಮೈಸೂರಿನ ಮುಖ್ಯ ಮಂತ್ರಿ ಶ್ರೀ ನಿಜಲಿಂಗಪ್ಪನವರು ಶ್ರೀ ಮಂಜುನಾಥ ಸ್ವಾಮಿಯ ಮುಂದೆ ಪ್ರಾರ್ಥಿಸುವುದು.

Sri S. Nijalingappa praying before Sri Manjunatha Swamy.



ಶ್ರೀ ಮಂಜುನಾಥ ಸ್ವಾಮಿ ದೇವಾಲಯ. ಧರ್ಮಸ್ಥಳ.
Sri Manjunath Swamy Temple, Dharmastal.



[illegible], ಧರ್ಮಸ್ಥಳ. (1933ರಲ್ಲಿ ಸರ್ವಧರ್ಮ ಸಮ್ಮೇಳನವು ಪ್ರಥಮತಃ ಇಲ್ಲಿ ನೆರೆದಿತ್ತು )
Temple Garden Dharmastal. (Where Sarva Dharma Sammelan was held first, in 1933.)



ಬೆಳ್ಳಿಯ ರಥದಲ್ಲಿ ಉತ್ಸವ.

ಈ ರಥವನ್ನು ದಿ। ಮಂಜಯ್ಯ ಹೆಗ್ಗಡೆಯವರು 1954ರಲ್ಲಿ ಆರಂಭಿಸಿದರು.
1955ರಲ್ಲಿ ಶ್ರೀ ರತ್ನವರ್ಮ ಹೆಗ್ಗಡೆಯವರು ಪಟ್ಟಕ್ಕೆ ಬಂದನಂತರ
1956ರಲ್ಲಿ ಇದರ ಕೆಲಸವು ಪೂರ್ಣಗೊಳಿಸಲ್ಪಟ್ಟಿತು.



ಅಣ್ಣಪ್ಪ ದೈವದ ಬೆಟ್ಟದ ಮೇಲೆ ಅಣ್ಣಪ್ಪ ದೈವದ ಗುಡಿ, ಶ್ರೀ ಧರ್ಮಸ್ಥಳ.

The Shrine of Annappa Daiva, The Vessal of Dharma Devatas at Sri Dharmastala.









ಶ್ರೀ ರತ್ನವರ್ಮ ಹೆಗ್ಗಡೆಯವರಿಗೆ ಶ್ರೀ ಧರ್ಮಸ್ಥಳದಲ್ಲಿ ತಾ. 13—9—55ರಂದು ಪಟ್ಟಾಭಿಷೇಕ ನಡೆದಾಗ,
(೧. ಮೆರವಣಿಗೆಯಾಗಿ ಹೋಗುತ್ತಿರುವುದು. ೨. ದೇವಾಲಯ ಪ್ರವೇಶ. ೩. ಪಲ್ಲಕ್ಕಿಯಲ್ಲಿ ಮೆರವಣಿಗೆ. ೪. ಪೂಜೆ.)



ಶ್ರೀ ಮಂಜುನಾಥ ಸ್ವಾಮಿಯ ಗರ್ಭಗುಡಿ, ಶ್ರೀಧರ್ಮಸ್ಥಳ.

The Shrine of Sri Manjunatha Swamy, Sri Dharmasthala.



ಶ್ರೀ ಧರ್ಮಸ್ಥಳದಲ್ಲಿ ಆಗಾಗ ನಾಟಕಗಳು ಪ್ರಯೋಗಿಸಲ್ಪಡುತ್ತಿವೆ. ಈ ಚಿತ್ರದಲ್ಲಿ 'ಶ್ರೀಕೃಷ್ಣ ಲೀಲೆ'ಯಲ್ಲಿ ಬಾಲಕ ವೀರೇಂದ್ರನು ಶ್ರೀಕೃಷ್ಣನ ಪಾತ್ರವಹಿಸಿದುದನ್ನು ತೋರಿಸಲಾಗಿದೆ.



ಕಳೆದ ವರುಷ ದೀಪೋತ್ಸವ ಕಾಲದಲ್ಲಿ ಶ್ರೀ ಜಿ. ಪಿ. ರಾಜರತ್ನಂರವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ಸಮ್ಮೇಲನ ನಡೆದಾಗ.



ಕಳೆದ ಸಪ್ಟಂಬರ ತಿಂಗಳಲ್ಲಿ ಮೂಡಬಿದರೆಯಲ್ಲಿ ಶ್ರೀ ರತ್ನವರ್ಮ ಹೆಗ್ಗಡೆಯವರು ಸಾಹಿತ್ಯೋತ್ಸವವನ್ನು ಉದ್ಘಾಟಿಸುವಾಗ.



ಶ್ರೀ ಗಣಪತಿ ಗುಡಿ, ಬ್ರಾಹ್ಮಣರ ಛತ್ರ, ಶ್ರೀ ಧರ್ಮಸ್ಥಳ.

Sri Ganapathi Shrine, Brahmins' Chatra, Sri Dharmastala.









1950ನೇ ಅಕ್ಟೋಬರದಲ್ಲಿ ಧರ್ಮಸ್ಥಳದಲ್ಲಿ ದಿ। ಮಂಜಯ್ಯ ಹೆಗ್ಗಡೆಯವರು ಡಾ। ಮೋದಿಯವರಿಂದ 'ನೇತ್ರಯಜ್ಞ' ನಡೆಸಿದಾಗ ತೆಗೆದ ಚಿತ್ರಗಳು.

([illegible] ಹುಡುಗಿಯು ಶಸ್ತ್ರಕ್ರಿಯೆಯಿಂದ [illegible] ಸರಿಪಡಿಸಿದ, ಶಸ್ತ್ರಕ್ರಿಯೆಯ ಮೊದಲಿನ ಮತ್ತು ಅನಂತರದ ಚಿತ್ರಗಳನ್ನು ಕೊಡಲಾಗಿದೆ.)



ಕಾಳರಾಹು ಗುಡಿ, ಶ್ರೀ ಧರ್ಮಸ್ಥಳ.

The Shrine of Kalarahu. Sri Dharmastal.



ಶ್ರೀ ಕೆ. ಹನುಮಂತಯ್ಯನವರು ಮೈಸೂರಿನ ಮುಖ್ಯ ಮಂತ್ರಿಗಳಾಗಿ ಶ್ರೀ ಧರ್ಮಸ್ಥಳವನ್ನು ಸಂದರ್ಶಿಸಿದಾಗ.

Photo taken on the occasion of Sri K. Hanumanthayya's visit as Chief Minister of Mysore to Dharmastala in 1956.



ವಸಂತ ಮಹಲು, ಶ್ರೀ ಧರ್ಮಸ್ಥಳ.



ಹೊಸತಾಗಿ ಕಟ್ಟಿಸಲ್ಪಟ್ಟ ಛತ್ರದ ಕಟ್ಟಡಗಳು, ಶ್ರೀ ಧರ್ಮಸ್ಥಳ.



ಶ್ರೀ ಚಂದ್ರನಾಥ ಸ್ವಾಮಿ ಬಸದಿ (ಎಡಕ್ಕೆ, ಮೇಲ್ಗಡೆಯಲ್ಲಿ) ಮತ್ತು ಧರ್ಮ ದೇವತೆಗಳು, ನೆಲೆಸಿದ ನೆಲ್ಯಾಡಿ ಬೀಡು (ಬಲಕ್ಕೆ)
ಈ ಬೀಡಿನಲ್ಲಿ ಸಾವಿರ ವರ್ಷಗಳ ಹಿಂದೆ ಹೆಗ್ಗಡೆಗಳು ವಾಸಿಸಿದ್ದರು.

Sri Chandranatha Swamy Basadi (*Top left*) and Nelliadi Beedu—
the first residence of Heggades a thousand years ago.



ಕದಿರೆ ದೇವಸ್ಥಾನ, ಮಂಗಳೂರು. (ಶ್ರೀ ಮಂಜುನಾಥ ಸ್ವಾಮಿಯ ಲಿಂಗವನ್ನು ಇಲ್ಲಿಂದಲೇ ಧರ್ಮಸ್ಥಳಕ್ಕೆ ತರಲಾಯಿತು.)

Kadri Temple, Mangalore, from where the Linga of Manjunath Swami was brought to Dharmastal



ಬೆಳ್ಳಿಯ ರಥ, ಧರ್ಮಸ್ಥಳ.

The Silver Car, Dharmastal.



ಕಾರ್ಕಳದಲ್ಲಿ 1956ರಲ್ಲಿ ನಡೆದ ಮಹಾಮಸ್ತಕಾಭಿಷೇಕದಲ್ಲಿ ಶ್ರೀ ರತ್ನವರ್ಮ ಹೆಗ್ಗಡೆಯವರಿಂದ ನಡೆದ ಅಭಿಷೇಕದಂದು ಮೆರವಣಿಗೆ.

ತಾ. 13—9—1957ರಂದು, ವಸಂತಮಹಲಿನಲ್ಲಿ ಶ್ರೀ ರತ್ನವರ್ಮ ಹೆಗ್ಗಡೆಯವರನ್ನು ಅವರ ಆಡಳಿತದ ಮೂರನೇ ವರ್ಷಾರಂಭದದಿನ ಗೌರವಿಸಲು ನೆರೆದ ಸಭೆಯಲ್ಲಿ ಶ್ರೀ ರತ್ನವರ್ಮ ಹೆಗ್ಗಡೆಯವರು ಭಾಷಣ ಮಾಡುತ್ತಿರುವಾಗ.



ತಾ. 19-11-'57ರಲ್ಲಿ ಧರ್ಮಸ್ಥಳದಲ್ಲಿ ಸರ್ವಧರ್ಮ ಸಮ್ಮೇಳನದ ಅಧ್ಯಕ್ಷತೆ ವಹಿಸುವ ಬಿಹಾರಿನ ಮಾಜಿ ರಾಜ್ಯಪಾಲ
ಶ್ರೀ। ರಂಗನಾಥ ರಾಮಚಂದ್ರ ದಿವಾಕರರವರು.

Sri R. R. Divakar, Ex-Governor of Bihar who presides today (19—11—1957).



ಕೇರಳದ ರಾಜ್ಯಪಾಲರಾಗಿರುವ ಡಾ। ಬಿ. ರಾಮಕೃಷ್ಣರಾವ್‌ರವರು
ತಾ. 21—11—'57ರಲ್ಲಿ ಕಲಾ ಸಮ್ಮೇಳನ ಉದ್ಘಾಟಿಸುವರು.

Dr. B. Ramakrishna Rao Governor of Kerala who will inaugurate Art Festival on 21—11—57.



ದೀಪೋತ್ಸವ ಕಾಲದಲ್ಲಿ ಹಣ್ಣುಕಾಯಿ ಅಂಗಡಿ ಮುಂದೆ ನೆರೆದ ಭಕ್ತವೃಂದದ ಒಂದು ನೋಟ.



ದೀಪೋತ್ಸವ ಕಾಲದಲ್ಲಿ ದೇವಾಲಯದೊಳಗೆ ಕೂಡಿದ ಭಕ್ತವೃಂದದ ಒಂದು ನೋಟ.



ಶ್ರೀ ಧರ್ಮಸ್ಥಳದಲ್ಲಿ ದೀಪೋತ್ಸವದ ಒಂದು ದೃಶ್ಯ.



ದೀಪೋತ್ಸವದ ಇನ್ನೊಂದು ದೃಶ್ಯ.



ಶ್ರೀ ಧರ್ಮಸ್ಥಳದ ಹಳೇ ಆಸ್ಪತ್ರೆ ಕಟ್ಟಡ



ಶ್ರೀ ಧರ್ಮಸ್ಥಳದ ಹಳೇ ಕಚೇರಿ



ಹೆಗ್ಗಡೆಯವರ ಬೀಡಿನೊಳಗೆ ಒಂದು ಮೂಲೆ.



ಶ್ರೀ ಚಂದ್ರನಾಥ ಬಸದಿಯೊಳಗೆ.



ಅಣ್ಣಪ್ಪ ದೈವದ ಬೆಟ್ಟಕ್ಕೆ ಹೋಗುವ ದಾರಿ.
Way to Annappa Daiva Betta



1957ರಲ್ಲಿ ಅಂದವಾಗಿ ಪುನರ್ರಚಿಸಲ್ಪಟ್ಟ ದೇವಾಲಯದ ಕೆರೆ, ಶ್ರೀ ಧರ್ಮಸ್ಥಳ.
The Temple Tank—rebuilt.



ಕುಮಾರ ಸ್ವಾಮಿ ಗುಡಿ, ಶ್ರೀ ಧರ್ಮಸ್ಥಳ.

The Shrine of Kumaraswamy, Sri Dharmastal.



ನಾಡಬದರಿಯಲ್ಲಿ (ದಿ) ಮಂಜಯ್ಯ ಹೆಗ್ಗಡೆಯವರ ಆತ್ಮಶಾಂತಿಗಾಗಿ 501 ಕಲಶ ನಡೆದಾಗ, ಆನೆಯ ಮೇಲೆ ಅವರ ಛಾಯಾಚಿತ್ರವಿಟ್ಟು ಮೆರವಣಿಗೆ.

ಶ್ರೀಮಾನ್ ಧರ್ಮಸ್ಥಳ ರತ್ನವರ್ಮ ಹೆಗ್ಗಡೆಯವರ ಪಟ್ಟಾಭಿಷೇಕಕ್ಕೆ ಪೂರ್ಣ ಕಲಶ ತುಂಬಿ ದೇವಾಲಯವನ್ನು ಪ್ರವೇಶಿಸುವುದು. (13—9—1955).

Sacred waters being brought to the temple for Abhishekam of Sri D. Ratnavarma Heggade on 13—9—1955.



ಶ್ರೀ ಚಂದ್ರನಾಥ ಸ್ವಾಮಿಯ ಬಸದಿ, ಧರ್ಮಸ್ಥಳ.

Sri Chandranatha Swamy Basadi, Dharmastala.



ಧರ್ಮದೇವತೆಗಳು ಶ್ರೀ ಧರ್ಮಸ್ಥಳದಲ್ಲಿ ಪ್ರತಿಷ್ಠಿಸಲು ಕದಿರೆಯಿಂದ ಶ್ರೀಮಂಜುನಾಥ ಸ್ವಾಮಿಯ ಲಿಂಗವನ್ನು ತರುತ್ತಿರುವುದು.

Dharmadevatas bringing Sri Manjunath Lingam for consecretion at Dharmasthala



ನೇತ್ರಾವತಿಯ ಸ್ನಾನಘಟ್ಟ, ಶ್ರೀ ಧರ್ಮಸ್ಥಳ.

Bathing Ghats, Netravati River, Shri Dharmasthala




೧

ಯೋ ವಿಶ್ವಂ ವೇದವೇದ್ಯಂ ಜನನ ಜಲನಿಧೇರ್ಭಂಗಿನಃ ಪಾರದೃಶ್ವಾ ।
ಪೌರ್ವಾಪರ್ಯಾ ವಿರುದ್ಧಂ ವಚನಮನುಪಮಂ ನಿಷ್ಕಲಂಕಂ ಯದೀಯಂ ॥
ತಂ ವಂದೇ ಸಾಧುವಂದ್ಯಂ ಸಕಲ ಗುಣನಿಧಿಂ ಧ್ವಸ್ತದೋಷದ್ವಿಷಂತಂ ।
ಬುದ್ಧಂ ವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂ ವಾ ॥

೨

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿನ್ನೈಯ್ಯಾಯಿಕಾಃ ॥
ಅರ್ಹನ್ನಿತ್ಯಥ ಜೈನ ಶಾಸನ ರತಾಃ ಕರ್ಮೇತಿ ಮೀಮಾಂಸಕಾಃ ।
ಸೋಯಂವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥

೩

ವಿಷ್ಣುರ್ವಾ ತ್ರಿಪುರಾಂತಕೋ ಭವತುವಾ ಬ್ರಹ್ಮಾಸುರೇಂದ್ರೋಥವಾ ।
ಭಾನುರ್ವಾ ಶಶಲಾಂಛನೋಥ ಭಗವಾನ್ ಬುದ್ಧೋಥ ಸಿದ್ಧೋಥವಾ ॥
ರಾಗದ್ವೇಷ ವಿಷಾರ್ತಿ ದೋಷರಹಿತಃ ಸತ್ವಾನು ಕಂಪೋದ್ಯತೋ ।
ಯಃ ಸರ್ವೈಃ ಸಹಸಂಸ್ಕೃತೋ ಗುಣಗಣೈಸ್ತಸ್ಮೈ ನಮಸ್ಸರ್ವದಾ ॥

೪

ತ್ರೈಲೋಕ್ಯಂ ಸಕಲಂ ತ್ರಿಕಾಲ ವಿಷಯಂ ಸಾಲೋಕ ಮಾಲೋಕಿತಂ ।
ಸಾಕ್ಷಾದ್ಯೇನ ಯಥಾಸ್ವಯಂ ಕರತಲೇ ರೇಖಾತ್ರಯಂ ಸಾಂಗುಲಿ ॥
ರಾಗ ದ್ವೇಷ ಭಯಾ ಮಯಾಂತಕ ಜರಾಲೋಲತ್ವ ಲೋಭಾದಯೋ ।
ನಾಲಂ ಯತ್ಪದ ಲಂಘನಾಯ ಸಮಹಾದೇವೋ ಮಯಾವಂದ್ಯತೇ ॥

೫

ಧರ್ಮಃ ಸರ್ವ ಸುಖಾಕರೋ ಹಿತಕರೋ ಧರ್ಮಂ ಬುಧಾಶ್ಚಿನ್ವತೇ ।
ಧರ್ಮೇಣೈವ ಸಮಾಪ್ಯತೇ ಶಿವಸುಖಂ ಧರ್ಮಾಯ ತಸ್ಮೈ ನಮಃ ॥
ಧರ್ಮಾನ್ನಾಸ್ತ್ಯಪರಃ ಸುಹೃದ್ಭವ ಭೃತಾಂ ಧರ್ಮಸ್ಯ ಮೂಲಂ ದಯಾ ।
ಧರ್ಮೇ ಚಿತ್ತ ಮಹಂ ದಧೇ ಪ್ರತಿದಿನಂ ಹೇ ಧರ್ಮ! ಮಾಂ ಪಾಲಯಾ ॥

೬

ಬುದ್ಧಸ್ತ್ವಮೇವ ವಿಬುಧಾರ್ಚಿತ ಬುದ್ಧಿ ಬೋಧಾ ।
ತ್ವಂ ಶಂಕರೋಸಿ ಭುವನತ್ರಯ ಶಂಕರತ್ವಾತ್ ॥
ಧಾತಾಸಿಧೀರ ಶಿವಮಾರ್ಗ ವಿಧೇರ್ವಿಧಾ ನಾ ।
ದ್ವ್ಯಕ್ತಂ ತ್ವಮೇವ ಭಗವನ್ ಪುರುಷೋತ್ತಮೋಸಿ ॥

೭

ಚರಣಾಂಭೋರುಹ ಮಗ್ನ ಭೃಂಗ ಸದೃಶಾ ಭಕ್ತಾ ರತಾ ಯತ್ತ್ಸವೇ ।
ಗಿರಿಜಾ ಚಂಚಲ ಲೋಚನಾಬ್ಜ ಮಹಸಾ ನೀರಾಜಿತಾಂಗೋ ಮುಹುಃ ॥
ಸುರ ಗಂಗಾ ನವಮಾಲಿಕಾ ವಿಲಸಿತಃ ಶ್ರೀ ಮಂಜುನಾಥೇಶ್ವರಃ ।
ವಿಲಸತ್ಪಾರಿಷದಾಂ ಗಣಸ್ಯದಿಶತಾತ್ ಮಾಂಗಲ್ಯ ಸಂಪತ್ತತಿಂ ॥

೮

ಮಂಜನಾಥಸ್ಯ ಕೃಪಯಾ ಮಂಜಾರ್ಯ ಪರಿಕಲ್ಪಿತಂ ।
ಧರ್ಮ ಸಮ್ಮೇಲನಂ ಜೀಯಾತ್ ಮಂಜುಭಾಷಿತ ಭೂಷಿತಂ ॥
ಧರ್ಮಸ್ಥಲ ವಿಭೋ ಶ್ರೀ ಮನ್ಮಂಜುನಾಥ ದಯಾನಿಧೇ ।
ಸಫಲೀ ಕುರು ರತ್ನಾರ್ಯ ಮನೋರಥ ಮಿಳಾ ಹಿತಂ ॥

೯

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ।
ಕ್ಲಿಷ್ಟೇಷು ಜೀವೇಷು ಕೃಪಾ ಪರತ್ವಂ ॥
ಮಾಧ್ಯಸ್ಥ ಭಾವಂ ವಿಪರೀತ ವೃತ್ತೌ ।
ಸದಾ ಮಮಾತ್ಮಾ ವಿದಧಾತು ದೇವ ॥

೧೦

ಅಸತೋಮಾ ಸದ್ಗಮಯ । ತಮಸೋಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾ ಅಮೃತಂ ಗಮಯ ॥

೧೧

ಸಹನಾ ವವತು; ಸಹನೌಭುನಕ್ತು; ಸಹವೀರ್ಯಂ ಕರವಾವ ಹೈ;
ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ—

॥ ಓಂ ಶಾಂತಿ ಶಾಂತಿ ಶಾಂತಿಃ ॥

---

೧

## ದೇವನೊಬ್ಬ ನಾಮ ಹಲವು

೨

ತ್ರಿಜಗತ್ಸ್ವಾಮಿ, ಜಿನೇಂದ್ರ, ಸಿದ್ಧ, ಶಿವ, ಲೋಕಾರಾಧ್ಯ, ಸರ್ವಜ್ಞ, ಶಂ ।
ಭು, ಜಗನ್ನಾಥ, ಜಗತ್ಪಿತಾಮಹ, ಹರ, ಶ್ರೀಕಾಂತ, ವಾಣೀಶ, ವಿ ॥
ಷ್ಣು, ಜಿತಾನಂಗ, ಜಿನೇಶ, ಪಶ್ಚಿಮ ಸಮುದ್ರಾಧೀಶ್ವರಾ, ಬೇಗದಿಂ ।
ನಿಜಮಂ ತೋರು ದಯಾಳುವೇ! ತಳುವಿದೇಂ? ರತ್ನಾಕರಾಧೀಶ್ವರಾ ॥

೩

ಶ್ರೀಮಂಜುನಾಥದೇವಂ ।
ಪ್ರೇಮದಿನೀ ಸರ್ವಧರ್ಮ ಸಮ್ಮೇಲನಮಂ ॥
ಸಾಮಂಜಸ್ಯತೆ ತರುತಂ ।
ಶ್ರೀಮಂಡಿತ ರತ್ನವರ್ಮನನಿಶಂ ಪೊರೆಗುಂ ॥

೪

ಶರಧಿಮಥನದೊಳುದಿಸಿ ವಿಷವಾ ।
ವರಿಸುತ್ತೈತರೆ ಕಂಡು ದೇವಾ ।
ಸುರರು ಮುನಿಗಳು ಬಂದು ನಿಮ್ಮಡಿಗೆರಗಿ ಮರೆವೊಗಲು ॥
ಪರಮ ಕರುಣಾ ಸಿಂಧು ಭಕ್ತರ ।
ಪೊರೆದು ಗರಳವ ಕರೆದು ಕಂಠದಿ ।
ಧರಿಸಿದೈಪರಮಾತ್ಮ ರಕ್ಷಿಸು ನಮ್ಮನನವರತ ॥

೫

ಪರಬೊಮ್ಮ ತ್ರಿಭುವನಸಾರ ಚಿದಂಬರ ।
ಪುರುಷ ನಿರಂಜನಸಿದ್ಧ ॥
ದುರಿತಂ ಜಯಹಂಸನಾಥ ನಮೋ ನಮೋ ।
ಗುರುವೆ ಪ್ರತ್ಯಕ್ಷನಾಗೆನಗೆ ॥

ಸತ್ಯಂ—ಶಿವಂ—ಸುಂದರಂ

---



# ಶ್ರೀ ಧರ್ಮಸ್ಥಳ ಕ್ಷೇತ್ರದ ಇತಿಹಾಸ

## ಶ್ರೀ ಧರ್ಮಸ್ಥಳ ಎಲ್ಲಿದೆ?

ಪ್ರಾಚೀನ ಕಾಲದ ಋಷಿಗಳ ತಪೋವನದಂತೆ ಪ್ರಶಾಂತವಾಗಿ, ಕಣ್ಮನಗಳಿಗೆ ಹರ್ಷವೀವ ವನಶ್ರೀಯಿಂದ ಕೂಡಿ, ಚಿತ್—ಶಾಂತಿಗೆ ಅನುಕೂಲವಾದ ವಾತಾವರಣದಲ್ಲಿ, ಸಂಸಾರದ ಗದ್ದಲದಿಂದ ದೂರವಿದ್ದೂ, ಸಾಂಸಾರಿಕರಿಂದ ದೂರವಿರದೆ, ಪ್ರಾಚೀನತಮ ಸೊಬಗನ್ನು ಧರಿಸಿಯೂ ಆಧುನಿಕ ಜಗತ್ತಿನಿಂದ ಪ್ರತ್ಯೇಕವಾಗಿರದೆ, ಕಂಗೊಳಿಸುವ ಶ್ರೀ ಕ್ಷೇತ್ರ ಧರ್ಮಸ್ಥಳವು ಹಲವು ಶತಮಾನಗಳಿಂದ ಭಾವುಕನಲ್ಲಿ ವಿಶ್ವಾಸ–ಶಾಂತತೆ—ನೆಮ್ಮದಿಗಳನ್ನು ಪುನರುಜ್ಜೀವಿಸಿ, ಪಾವನಕ್ಷೇತ್ರವಾಗಿ, ಪ್ರತಿದಿನವೂ ದೇಶದ ಹಲವು ಭಾಗಗಳಿಂದ ಯಾತ್ರಿಕರನ್ನಾಕರ್ಷಿಸುತ್ತಿದೆ. ಪ್ರವಾಸಿಯು ಈ ಪುಣ್ಯಕ್ಷೇತ್ರವನ್ನು ಪ್ರವೇಶಿಸುವಾಗ ಒಂದು ಅವರ್ಣನೀಯ ಆನಂದವನ್ನನುಭವಿಸುವನು. ತನ್ನ ಚೇತನವೂ ಆತ್ಮಬಲವೂ ಇಮ್ಮಡಿಯಾಗುತ್ತಿದೆಯೆಂಬ ಭಾವನೆಯನ್ನು ತಾಳುವನು.

ದಕ್ಷಿಣ ಭಾರತದ ಸುಪ್ರಸಿದ್ಧ ಕ್ಷೇತ್ರಗಳಲ್ಲಿ ಶ್ರೀ ಧರ್ಮಸ್ಥಳವು, ಆಸ್ತಿಕ ಲೋಕಕ್ಕೆ, ಎಂದೆಂದೂ ಆಕರ್ಷಣೀಯವಾಗಿರುವ ಒಂದು ಕ್ಷೇತ್ರವಾಗಿದೆ. ಇದು, ಬೆಳ್ತಂಗಡಿ ತಾಲೂಕಿನಲ್ಲಿ, ಮಂಗಳೂರು–ಚಾರ್ಮಾಡಿ ರಸ್ತೆಯಲ್ಲಿ ಮಂಗಳೂರಿನಿಂದ 40ನೇ ಮೈಲು ಬಳಿ ಮತ್ತು ಚಾರ್ಮಾಡಿಯಿಂದ 20 ಮೈಲು ದೂರವಿರುವ ಉಜಿರೆ ಎಂಬಲ್ಲಿ, ಕವಲೊಡೆವ ರಸ್ತೆಯಲ್ಲಿ, ಉಜಿರೆಯಿಂದ 5½ ಮೈಲು ದೂರದಲ್ಲಿದೆ. ನೇತ್ರಾವತಿ ನದಿಯು, ಕ್ಷೇತ್ರದ ಉತ್ತರದಲ್ಲಿ ಹರಿಯುತ್ತಿದೆ. ಇತರ ಮೂರು ಕಡೆಗಳಲ್ಲಿಯೂ ಸಣ್ಣ–ದೊಡ್ಡ ಹೊಳೆಗಳು ಹರಿಯುತ್ತ, ಧರ್ಮಸ್ಥಳವು ನದೀದುರ್ಗದೊಳಗಿದ್ದಂತಿದೆ. 1941ನೇ ಖಾನೇಶುಮಾರಿಯಂತೆ ಧರ್ಮಸ್ಥಳದ ಜನಸಂಖ್ಯೆ 1400. ಮನೆಗಳು 200. ಇದರಲ್ಲಿ ಸುಮಾರು 800 ಜನರು ದೇವಾಲಯದ ಬಳಿಯೇ ಮನೆಮಾಡಿಕೊಂಡಿರುವರು. ಸೇಕಡಾ 40ರಷ್ಟು ಜನರು ಅಕ್ಷರಸ್ಥರು. ಹವಾಗುಣವು, ಬೇಸಗೆಯಲ್ಲಿ ಅತಿ ಉಷ್ಣವಾಗಿಯೂ ಮಳೆಗಾಲದಲ್ಲಿ ಸಮಶೀತೋಷ್ಣವಾಗಿ ಹಿತಕರವಾಗಿಯೂ ಇದೆ. ಕ್ಷೇತ್ರದ ಬಳಿ ಸಣ್ಣ ಸಣ್ಣ ಬಯಲುಗಳೂ, ಬೆಟ್ಟಗಳೂ, ತೆಂಗು–ಕಂಗುಗಳ ತೋಟಗಳೂ ಕಂಗೊಳಿಸುತ್ತಿವೆ. ಅನತಿದೂರದಲ್ಲೇ, ಎತ್ತರವಾದ ಗೋಪುರಗಳಂತೆ ಕಾಣುವ ಬೆಟ್ಟಗಳೂ, ಕಡುಹಸುರನ್ನು ಪಸರಿಸಿರುವ ವನಶ್ರೀಯೂ ನೋಟಕರನ್ನು ಮುಗ್ಧಗೊಳಿಸುವುವು. ಬಳಿಯಲ್ಲೇ ಜಯಕೀರ್ತಿ ಬೆಟ್ಟ ಅಥವಾ ಶಿವರಾತ್ರಿ ಬೆಟ್ಟ, ಅಣ್ಣಪ್ಪನ ಬೆಟ್ಟ ಮೊದಲಾದುವುಗಳನ್ನು ಕಾಣಬಹುದು.

# ಕ್ಷೇತ್ರದ ಆರಂಭಕಾಲ

ಈಗ ಧರ್ಮಸ್ಥಳ ಎಂದು ಕರೆಯುವ ಸ್ಥಳವನ್ನೇ ಮೊದಲು "ಕುಡುಮ" ಎನ್ನುತಿದ್ದರು. ಕೊಡು ಎಂಬ ಶಬ್ದವೆ ಕುಡು+ಮ. ಕೊಡುವ=ದಾನ ಕೊಡತಕ್ಕ ಸ್ಥಳವೆಂದರ್ಥ. ಸುಮಾರು ಒಂದು ಸಾವಿರ ವರ್ಷಗಳ ಹಿಂದೆ, ಈಗ 'ನೆಲ್ಯಾಡಿಬೀಡು' ಎಂದು ಕರೆಯುವ ಬೀಡಿನಲ್ಲಿ ಬರ್ಮಣ್ಣ ಪೆರ್ಗಡೆ ಎಂಬವರು ಪತ್ನಿ ಅಮ್ಮುದೇವಿ ಬಲ್ಲಾಳತಿಯರೊಂದಿಗೆ ವಾಸಮಾಡಿಕೊಂಡಿದ್ದರು. ಬಳಿಯಲ್ಲಿಯೇ, ಈಗ ಇರುವ ಚಂದ್ರನಾಥ ಬಸ್ತಿಯೂ ಇದ್ದಿತು. ಒಂದು ದಿನ ಧರ್ಮದೇವತೆಗಳು ಮನುಷ್ಯರೂಪವನ್ನು ತಾಳಿ ಆನೆ-ಕುದುರೆಗಳ ಮೇಲೆ ಕುಳಿತುಕೊಂಡು, ಪರಿವಾರ ಸಮೇತರಾಗಿ ರಾಜವೈಭವದಿಂದಲೂ, ದೈವಿಕವಾದ ತೇಜಸ್ಸಿನಿಂದಲೂ ಕೂಡಿದವರಾಗಿ ನೇಲ್ಯಾಡಿಬೀಡಿಗೆ ಬಂದು ಹೊಕ್ಕರು. ಆಗ ಅಮ್ಮುದೇವಿ ಬಲ್ಲಾಳ್ತಿಯವರು ಪ್ರೀತಿ-ಗೌರವಗಳಿಂದ ಅವರನ್ನು ಉಪಚರಿಸಿದರು. ಮೆಚ್ಚಿದ ಧರ್ಮದೇವತೆಗಳು "ಪೆರ್ಗಡೆ, ನಿಮ್ಮ ವಾಸದ ಮನೆ ನೆಲ್ಯಾಡಿ ಬೀಡನ್ನು ನಮಗೆ ಬಿಟ್ಟು, ನೀವು ಬೇರೆ ಮನೆಯನ್ನು ಹತ್ತಿರದಲ್ಲಿಯೇ ಕಟ್ಟಿ ವಾಸಮಾಡಿರಿ" ಎಂದು ತಿಳಿಸಿ, ಅವರಿಗೆ "ಐಶ್ವರ್ಯವು ಅಕ್ಷಯವಾಗಲಿ" ಎಂದು ಹರಸಿ ಮಾಯವಾದರು. ಆಗ ಹೆಗ್ಗಡೇರು ಮತ್ತು ದೇವಿ ಬಲ್ಲಾಳ್ತಿಯವರು, ಬಂದ ಅತಿಥಿಗಳು ಸಾಮಾನ್ಯ ಮನುಷ್ಯರಲ್ಲವೆಂದೂ, ತಮ್ಮನ್ನು ಪರೀಕ್ಷೆಮಾಡಲು ಬಂದ ದೇವತೆಗಳೆಂದೂ ಊಹಿಸಿ ತಿಳಿದು, ಅವರಿಗೆ ತೂಗುವ ಉಯ್ಯಾಲೆ-ಮಂಚಗಳನ್ನಿಟ್ಟು ದೀಪಧೂಪಗಳಿಂದ ಸತ್ಕರಿಸುತ್ತ ಬಂದರು. ಅನಂತರ ತಿರಿಗಿ ಮೊದಲಿನಂತೆ ಸ್ವಪ್ನದಲ್ಲಿ ಕಾಣಿಸಿಕೊಂಡು, "ನಾವು ಕಾಳರಾಹು, ಕಳರ್ಕಾಯಿ ಕುಮಾರಸ್ವಾಮಿ, ಕನ್ಯಾಕುಮಾರಿ ಎಂಬ ಪ್ರತಾಪ ತೋರುವ ದೇವತೆಗಳಾಗಿರುವೆವು. ನಾವು ತೋರುವ ಸ್ಥಳದಲ್ಲಿ ನಮಗೆ ಬೇರೆ ಬೇರೆ ಗುಡಿಗಳನ್ನು ಕಟ್ಟಿಸಿ ಕಾಲಕಾಲಕ್ಕೆ ಪರ್ವ-ನಡಾವಳಿಗಳನ್ನು ಮಾಡಿಸಬೇಕು. ಉತ್ತಮ ಕುಲದ ಇಬ್ಬರನ್ನು ನಮಗೆ ಪಾತ್ರಿಗಳಾಗಿ ನೇಮಿಸಬೇಕು. ನಮ್ಮ ಅಭಿಪ್ರಾಯವನ್ನು ಮುಂದಕ್ಕೆ ಅವರಿಂದ ನಿಮಗೆ ತಿಳಿಸುವೆವು. ನಮ್ಮ ದೂತನಾದ ಅಣ್ಣಪ್ಪನಿಂದ ಎಲ್ಲ ಕಾರ್ಯಗಳನ್ನು ನಿರ್ವಹಿಸುವೆವು. ಆಯಾ ಕಾಲದಲ್ಲಿ ನಡೆಯುವ ಕಾರ್ಯಗಳಿಗೆ ಲೋಪವಾಗದಂತೆ ಕಾರ್ಯನಿರ್ವಹಣ ಮಾಡುವುದಕ್ಕಾಗಿ ನಿಮಗೆ ಸರಿ ಕಾಣುವ ಯೋಗ್ಯರಾದ ನಾಲ್ಕು ಮಂದಿಯನ್ನು ನೀವು ನೇಮಿಸಿ ನಿಮ್ಮ ಸಹಕಾರಕ್ಕಾಗಿ ಇಟ್ಟುಕೊಳ್ಳಬೇಕು. ನೀವು ಭಕ್ತಿ-ಶ್ರದ್ಧೆಗಳಿಂದ ನಮ್ಮನ್ನು ಆರಾಧಿಸಿಕೊಂಡು ಬಂದರೆ ನಿಮ್ಮ ಕುಟುಂಬ-ಸಂಪತ್ತು-ಆಯುರಾರೋಗ್ಯಾದಿಗಳನ್ನು ಅಭಿವೃದ್ಧಿಪಡಿಸಿಕೊಡುವೆವು. ದೇಶದೇಶಾಂತರಗಳಲ್ಲಿ ನಮ್ಮ ಪ್ರಭಾವವನ್ನು ಬೀರಿ ಧಾರಾಳವಾಗಿ ಹರಿಕೆ-ಕಾಣಿಕೆಗಳನ್ನು ತರಿಸಿಕೊಡುವೆವು. ಆದ್ದರಿಂದ ಸರ್ವರಿಗೂ ಏಕಪ್ರಕಾರವಾದ ದಾನ ಧರ್ಮಗಳು ಸದಾಕಾಲವೂ ನಡೆಯುತ್ತಿರಬೇಕು. ನಿಮ್ಮ ಮಾತನ್ನು ನಿಜ ಮಾಡಿಕೊಟ್ಟು ನಿಮ್ಮ ಬಯಕೆಗಳಿಗೆ ಬೆಂಬಲಿಗರಾಗಿ, ನಿಮ್ಮ ಸರ್ವ ಕಾರ್ಯಗಳಿಗೂ ಜಯವನ್ನು ಕೊಡುವೆವು. ಇದಕ್ಕೆ ವಿರೋಧವಾಗಿ ನಡೆದರೆ ನಿಮಗೇ ಕೇಡು ಉಂಟಾಗುವುದು" ಎಂದು ಹೇಳಿದಂತಾಯ್ತು. ತೇಜಸ್ವಿಗಳಾಗಿ ಕಾಣಿಸಿಕೊಂಡ ದೈವಗಳ ಮಾತುಗಳನ್ನು ಗ್ರಹಿಸಿ, ಬರ್ಮಣ್ಣ ಹೆಗ್ಗಡೆಯವರು ಆನಂದಾತಿರೇಕದಿಂದ ಅಮ್ಮುದೇವಿ ಬಲ್ಲಾಳ್ತಿಯವರೊಡನೆ ಯೋಚಿಸಿ, ತಮ್ಮ ಸ್ಥಳದಲ್ಲಿ ಗುಡಿಗಳನ್ನು ಕಟ್ಟಿಸಿ ಮೂರ್ತಿಗಳನ್ನು ಇಡಿಸಿದರು.

ದೇವತೆಗಳ ಸಂಕಲ್ಪದಂತೆ ಬೇರೆ ಬೇರೆ ಗುಡಿಗಳನ್ನು ಆಯಾ ಸ್ಥಳಗಳಲ್ಲಿ ಕಟ್ಟಿಸಿಕೊಟ್ಟರು. ಆಯಾ ಕಾಲದಲ್ಲಿ ಉತ್ಸವ, ಪರ್ವ, ನಡಾವಳಿಗಳನ್ನು ನಡೆಸಲು ಪ್ರಾರಂಭಿಸಿದರು. ದಾನಧರ್ಮಗಳನ್ನು ಮಾಡುವುದಕ್ಕಾಗಿ ಬ್ರಾಹ್ಮಣ ಸಂತರ್ಪಣೆ ಮಾಡಬೇಕೆಂದು ಹೆಗ್ಗಡೆಯವರು ಬ್ರಾಹ್ಮಣರನ್ನು ಕರೆಯಿಸಿದರು. ಆಗ ಬ್ರಾಹ್ಮಣರು "ದೇವರ ಆರಾಧನೆಯಿಲ್ಲದ ಸ್ಥಳದಲ್ಲಿ ನಾವು ಸಂತರ್ಪಣೆಗೆ ಬರುವುದು ಸರಿಯಲ್ಲ" ಎಂದು

ಹೇಳಿದರು. ಆಗ ಹೆಗ್ಗಡೆಯವರು ತನ್ನ ಬಯಕೆ ಕೈಗೂಡಲಿಲ್ಲವೆಂದು ಚಿಂತಾಕ್ರಾಂತರಾದಾಗ ಧರ್ಮದೇವತೆ ಗಳು ದೂತನಾದ ಅಣ್ಣಪ್ಪನನ್ನು ಕಳುಹಿಸಿ, ಕಾಶಿಯಿಂದ ಕದಿರೆಗೆ ತಂದಿದ್ದ ಶಿವಲಿಂಗವನ್ನು ತರಿಸಿ ಈಗ ದೇವಾ ಲಯವಿರುವ ಸ್ಥಳದಲ್ಲಿಯೇ ಇರಿಸಿದರು. ಕದಿರೆಯಿಂದ ತಂದ ಲಿಂಗವಾದ್ದರಿಂದ "ಶ್ರೀ ಮಂಜುನಾಥ" ಎಂಬ ಹೆಸರೇ ಈ ಲಿಂಗಕ್ಕೂ ಪ್ರಸಿದ್ಧವಾಯಿತು. "ಮಂಜುನಾಥ" ಎಂದರೆ ಮಂಜುಳ ಎಂದರೆ ಮನೋಹರ, ಸುಂದರವಾದ, ನಾಥ, ಒಡೆಯ ಅಥವಾ ಪ್ರಭು. ಅಂತು 'ಮಂಜುಳ' ದಿಂದ 'ಮಂಜು' ಹುಟ್ಟಿ ಮಂಜು ನಾಥ ಎಂದು ಅರ್ಥಮಾಡಬಹುದು. ಇನ್ನೊಂದು, ಮಂಜುಘೋಷನೆಂಬ ಬೋಧಿಸತ್ವದಿಂದ ಈ ಹೆಸರು ಕದಿರೆಯ ಈಶ್ವರ ಲಿಂಗಕ್ಕೆ ಬಂದು ಮಂಜುನಾಥ ಎಂದು ಹೇಳುವುದುಂಟು. ಅಂತೂ ಸೌಂದರ್ಯಕ್ಕೆ ಒಡೆಯ ದೇವರು ಎಂದರೆ ಸರಿ. ಆ ಮೇಲೆ ಅಲ್ಲಿ ಹೆಗ್ಗಡೆಯವರು ದೇವಾಲಯವನ್ನು ಕಟ್ಟಿಸಿದರು. ಆ ವರೆಗೆ ಆ ಸ್ಥಳದಲ್ಲಿ, ಈಗ ಇರುವ ಅಮ್ಮನವರ ಗುಡಿಯು ಅದೇ ಸ್ಥಳದಲ್ಲಿ ಇದ್ದಿತು. ಹೆಗ್ಗಡೆಯವರು ನಿತ್ಯಪೂಜೆ, ಉತ್ಸವ ಮೊದಲಾದ ದೇವತಾಕಾರ್ಯಗಳನ್ನೆಲ್ಲ ಒಂದೊಂದಾಗಿ ಮಾಡಿಸುತ್ತಾ ಬಂದರು. ತನ್ನ ಸ್ವಂತ ಭೂಮಿಯ ಒಂದು ಭಾಗವನ್ನು ದೇವಾಲಯದ ವಿನಿಯೋಗಕ್ಕಾಗಿ ವಿನಿಯೋಗಿಸಿದರು.

ಆ ಮೇಲೆ ಪದ್ಮಯ್ಯ ಹೆಗ್ಗಡೆಯವರು ಅಧಿಕಾರ ವಹಿಸಿದರು. ಕುಡುಮದ ಹತ್ತಿರವಿರುವ 'ಕಲ್ಲೇರಿ' ಎಂಬಲ್ಲಿ ಒಂದು ಬ್ರಾಹ್ಮಣರ ಮನೆ ಇತ್ತು. ಅವರು ಭಜಿಸುತ್ತಿದ್ದ ದೈವವು ಕಲ್ಲೇರಿತ್ತಾಯ ಎಂದಾಗಿತ್ತು. ಆಣೆಮಾತಿನ ಸಂಬಂಧವಾಗಿ ದೈವವು ಶ್ರೀ ಮಂಜುನಾಥ ಸ್ವಾಮಿಯ ಸನ್ನಿಧಿಗೆ ತರಲ್ಪಟ್ಟು ದೇವಸ್ಥಾನದ ಪಕ್ಕ ದಲ್ಲಿಯೇ ಉತ್ತರ ಭಾಗದಲ್ಲಿ ನೆಲೆಗೊಳಿಸಲ್ಪಟ್ಟಿತು. ಈಗಲೂ ಅದೇ ಸ್ಥಳದಲ್ಲಿ ಪ್ರತಿ ತಿಂಗಳೂ ಸೇವೆಸಲ್ಲು ತ್ತದೆ. ಈ ದೈವ, ಜನರ ಕಷ್ಟಸುಖಗಳಿಗೆ ಕಾರಣವಾಗಿ, ಅಣ್ಣಪ್ಪ ದೈವಕ್ಕೆ ಕೈ ಬಂಟನಾಗಿ ನಡೆದುಬಂದಿತು. ಪದ್ಮಯ್ಯ ಹೆಗ್ಗಡೆಯವರಿಗೆ ಮಕ್ಕಳಿರಲಿಲ್ಲ. ಇವರು ಶಾ. ಶ. ೧೩೫೪ ಅಂದರೆ ಕ್ರಿ. ಶ. ೧೪೩೨ರಲ್ಲಿ ದಿವಂಗತ ರಾದರು. ಆ ಮೇಲೆ ಇವರ ತಂಗಿ ಗುಮ್ಮಕ್ಕನ ಮಗನಾದ ಚಂದಯ್ಯ ಎಂಬವರನ್ನು ದತ್ತಮಾಡಿದರು.

ಚಂದಯ್ಯ ಹೆಗ್ಗಡೆಯವರು ಅಧಿಕಾರ ವಹಿಸಿದ ಮೇಲೆ ಶ್ರೀ ಸ್ವಾಮಿಯಲ್ಲಿ ಭಕ್ತಿ—ಶ್ರದ್ಧೆಗಳನ್ನಿಟ್ಟು ನಡೆಸುತ್ತಾ ಬಂದರು. ಅವರಿಗೆ ಆಗಾಗ ಅಸೌಖ್ಯ ಉಂಟಾಗುತ್ತಿತ್ತು. ಅವರ ಭಕ್ತಿಗೆ ಮೆಚ್ಚಿ ಶ್ರೀ ಸ್ವಾಮಿಯು ಅವರ ಕಾಹಿಲೆಯನ್ನು ಪರಿಹರಿಸಿದರು. ಅದಕ್ಕಾಗಿ ಶಾ. ಶ. ೧೪೦೨ ಅಂದರೆ ಕ್ರಿ. ಶ. ೧೪೮೦ನೇ ಶಾರ್ವರಿ ಸಂವತ್ಸರದ ಮೇಷಮಾಸದಲ್ಲಿ ಚಿನ್ನದ ನಾಗಾಭರಣವನ್ನು ಮಾಡಿಸಿ ಶ್ರೀ ಸ್ವಾಮಿಗೆ ಅರ್ಪಿಸಿದರು. ಇವರು ಕ್ರಿ. ಶ. ೧೫೦೩ಕ್ಕೆ ದಿವಂಗತರಾದರು. ಆ ಮೇಲೆ ಇವರ ತಂಗಿಯ ಮಗನಾದ ದೇವರಾಜ ಹೆಗ್ಗಡೆಯವರು ದತ್ತವಾಗಿ ಅಧಿಕಾರಕ್ಕೆ ಬಂದರು.

## ಶ್ರೀ ಕ್ಷೇತ್ರ ಧರ್ಮಸ್ಥಳ

ದೇವರಾಜ ಹೆಗ್ಗಡೆಯವರ ಕಾಲದಲ್ಲಿ ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಮಠದ ವಾದಿ ರಾಜ ಸ್ವಾಮಿಗಳು ಕ್ಷೇತ್ರಕ್ಕೆ ಬಂದರು. ಹೆಗ್ಗಡೆಯವರು ಅವರನ್ನು ಸತ್ಕರಿಸಿ "ಭಿಕ್ಷೆ ಸ್ವೀಕರಿಸಬೇಕು" ಎಂದರು. "ಶೈವಗಳು ತಂದು ಪ್ರತಿಷ್ಠಿಸಿದ ಲಿಂಗವಿರುವ ಸ್ಥಳದಲ್ಲಿ ಭಿಕ್ಷೆ ಸ್ವೀಕರಿಸುವುದಿಲ್ಲ" ಎಂದರು. ಆಗ ಹೆಗ್ಗಡೆಯವರು ಅವರನ್ನೇ ಕೇಳಿ, ಅವರೇ ಹೇಳಿದ ಸರ್ವಸನ್ನಾಹಗಳನ್ನೂ ಒದಗಿಸಿ ಕೊಟ್ಟು ಅವರ ಕೈಯಿಂದಲೇ ವೈಷ್ಣವ ವಿಧಿ ಪ್ರಕಾರ ಕಲಶ, ಪ್ರಾಣಪ್ರತಿಷ್ಠೆಗಳನ್ನು ಮಾಡಿಸಿದರು. ಆಗ ಶ್ರೀ ವಾದಿರಾಜ

ಸ್ವಾಮಿಯವರು ಸಂತೋಷಪಟ್ಟು ಆಗಲೇ ಸ್ಥಳದಲ್ಲಿ ನಡೆಯುತ್ತಿದ್ದ ದಾನಧರ್ಮಗಳನ್ನು ಕಂಡು 'ಧರ್ಮಸ್ಥಳ' ಎಂಬ ಹೆಸರಿಟ್ಟರು. ಅಂದಿನಿಂದ ಕುಡುಮ ಎಂಬ ಊರು ಧರ್ಮಸ್ಥಳ ಎಂಬ ಹೆಸರಿನಿಂದ ಪ್ರಸಿದ್ಧಿಗೆ ಬಂತು. ದೇವರಾಜ ಹೆಗ್ಗಡೆಯವರು ದಿವಂಗತರಾದ ಮೇಲೆ ಮಂಜಯ್ಯ ಹೆಗ್ಗಡೆಯವರು ಅಧಿಕಾರ ವಹಿಸಿದರು.

ಮಂಜಯ್ಯ ಹೆಗ್ಗಡೆಯವರು ೩೩ ವರ್ಷ ಕಾಲ ಆಡಳಿತಮಾಡಿ ಮೃತರಾದ ಮೇಲೆ ಕ್ರಮಕ್ರಮವಾಗಿ ಜಿನ್ನಪ್ಪ ಹೆಗ್ಗಡೆ, ಚಂದಯ್ಯ ಹೆಗ್ಗಡೆ, ದೇವಪ್ಪರಾಜ ಹೆಗ್ಗಡೆ, ಅನಂತಯ್ಯ ಹೆಗ್ಗಡೆ, ವೃಷಭಯ್ಯ ಹೆಗ್ಗಡೆ, ಗುಮ್ಮಣ್ಣ ಹೆಗ್ಗಡೆ, ವರದಯ್ಯ ಹೆಗ್ಗಡೆ, ಚಂದಯ್ಯ ಹೆಗ್ಗಡೆ ಎಂಬವರು ಒಬ್ಬರ ನಂತರ ಒಬ್ಬರಾಗಿ ಅಧಿಕಾರ ನಿರ್ವಹಿಸಿದರು. ಕೊನೆಯವರಾದ ಚಂದಯ್ಯ ಹೆಗ್ಗಡೆಯವರು ೨೭ ವರ್ಷಗಳ ಕಾಲ ಆಡಳಿತೆ ಮಾಡಿದರು. ಇವರು ಮಂಗಳೂರಿನಿಂದ ಉತ್ತರಕ್ಕಿರುವ ಕೂಳೂರು ಬೀಡಿನಲ್ಲಿದ್ದ ಕುಮಾರಯ್ಯ ಎಂಬವರನ್ನು ದತ್ತಮಾಡಿ ಕೊಂಡರು. ಕೂಳೂರು ಬೀಡಿಗೆ ಬೇರೆ ಯಜಮಾನರಿಲ್ಲವಾದ್ದರಿಂದ ಇವರ ತಂಗಿಯ ಗಂಡನಾದ ಮೂಡಬಿದ್ರಿ ಭದ್ರಯ್ಯ ಶೆಟ್ಟರನ್ನು ಕೂಳೂರು ಬೀಡಿನಲ್ಲಿ ನಿಲ್ಲಿಸಿ, ಅಲ್ಲಿನ ಮತ್ತು ಕ್ಷೇತ್ರದ ಅಧಿಕಾರವನ್ನು ಕುಮಾರಯ್ಯ ಹೆಗ್ಗಡೆಯವರೇ ನಿರ್ವಹಿಸಿದರು. ಆವರ ಕಾಲದ ನಂತರ ಕೂಳೂರು ಬೀಡಿನವರಿಗೂ ಇಲ್ಲಿನವರಿಗೂ ವಿವಾದ ಉಂಟಾಗಿ ಭೂಮಿಯನ್ನು ವಿಂಗಡಿಸಿಕೊಂಡರು. ಈಗಲೂ ಕೂಳೂರಿನಲ್ಲಿ ಇಲ್ಲಿಗೆ ಭೂಮಿಯಿದೆ.

ಕುಮಾರಯ್ಯ ಹೆಗ್ಗಡೆಯವರು ಮಹಾ ಪ್ರತಾಪಿಗಳು. ಇವರು ಕ್ರಿ. ಶ. ೧೭೮೫ರಿಂದ ೧೮೩೦ರ ವರೆಗೆ ಇದ್ದರು. ಇವರು ವೀರರಾದುದರಿಂದ ಇವರೊಂದಿಗೆ ಹಲವು ಯೋಧರಿದ್ದರು. ಇವರು 'ದಶಾವತಾರ' ಎಂಬ ಬಯಲಾಟವನ್ನು ಪ್ರೋತ್ಸಾಹಿಸಿದರು. ಆಗ ಮೈಸೂರಿನಲ್ಲಿ ಕೃಷ್ಣರಾಜ ಒಡೆಯರವರು ಅಧಿಕಾರ ನಿರ್ವಹಿಸುತ್ತಿದ್ದರು. ಇವರು ಮೈಸೂರಿಗೆ ಹೋಗಿ ಅರಸರ ವಿಶೇಷವಾದ ಸತ್ಕಾರವನ್ನು ಹೊಂದಿದ್ದರು. ತನ್ನೊಂದಿಗೆ ಬಂದ ಬಯಲಾಟದವರನ್ನು ಅರಸರ ಅಭಿಪ್ರಾಯದಿಂದ ಅಲ್ಲೇ ನಿಲ್ಲಿಸಿದರು. ಅರಸರು ಬಯಲಾಟದವರಿಗೆ ಬಿಡಾರ ಕೊಟ್ಟರು. ಅವರನ್ನು 'ಬಿಡಾರ'ದವರು ಎಂದು ಈಗಲೂ ಕರೆಯುತ್ತಾರೆ. ಹೆಗ್ಗಡೆಯವರು ಅರಸರ ಭೇಟಿ ಪಡೆದ ನೆನಪಿಗಾಗಿ ಅರಸರು 'ಕಬ್ಬಾಳು' ಎಂಬ ಗ್ರಾಮವನ್ನು ಶ್ರವಣಬೆಳಗುಳದ ಮಠಕ್ಕೆ ಉಂಬಳಿಯಾಗಿ ಬಿಟ್ಟರು. ಅಲ್ಲಿಂದ ಹೆಗ್ಗಡೆಯವರು ಕೊಡಗಿಗೆ ಬಂದು ಆಗ ಅಲ್ಲಿದ್ದ ವೀರರಾಜೇಂದ್ರ ಅರಸನ ಅತಿಥಿಗಳಾಗಿ, ಉತ್ತಮವಾದ ಆಯುಧಗಳನ್ನು ಉಚಿತವಾಗಿ ಪಡೆದು ಊರಿಗೆ ಮರಳಿದರು.

ಇವರು ಊರಿಗೆ ಬಂದ ಮೇಲೆ ವೀರರಾಜೇಂದ್ರ ಅರಸರು ಧರ್ಮಸ್ಥಳಕ್ಕೆ ಬಂದು ಯೋಗ್ಯವಾದ ಸತ್ಕಾರವನ್ನು ಹೊಂದಿ ತೆರಳಿದರು. ಉಜಿರೆಗೆ ಸಮೀಪವಿರುವ ಜಮಲಾಬಾದು ಕೋಟೆಯು ಟೀಪು ಸುಲ್ತಾನನ ಅಧೀನದಲ್ಲಿದ್ದಿತು. ಈಸ್ಟ್ ಇಂಡಿಯಾ ಕಂಪೆನಿಯವರಿಗೂ ಆತನಿಗೂ ಆಗಾಗ ವಿರೋಧಗಳುಂಟಾಗುತ್ತಿದ್ದುವು. ಸುಬ್ರಾಯನ ಗುಲ್ಲು ನಾಲ್ಕು ಕಡೆಯೂ ಕೇಳಿಬರುತ್ತಿತ್ತು. ಸುಬ್ರಾಯನ ಗುಲ್ಲನ್ನು ಇದಿರಿಸಿ, ಇಂಗ್ಲಿಷರ ಪಕ್ಷದಿಂದ ಟಿಪ್ಪುವನ್ನು ಇದಿರಿಸಿದರು. ಕೊನೆಗೆ ಕೋಟೆಯು ಇಂಗ್ಲೀಷರ ವಶಕ್ಕೆ ಬಂತು. ಇವರು ಕರ್ಣಾಟಕದಲ್ಲೆಲ್ಲ ಸಂಚರಿಸಿ ಸ್ಥಳದ ಕೀರ್ತಿಯನ್ನು ಹೆಚ್ಚಿಸಿದರು. ಈ ಕಾಲವು ಒಂದು ಸಂದಿಗ್ಧ ಕಾಲವಾಗಿತ್ತು. ಟಿಪ್ಪು ಸುಲ್ತಾನನ ಮತ್ತು ಅವನ ಕಡೆಯ ಗವರ್ನರರ ಆಡಳಿತೆ ತಪ್ಪಿ ಕಂಪೆನಿ ಬ್ರಿಟಿಷ್ ಸರಕಾರ ನೆಲೆ ಊರುವ ಸಮಯ ಮುಹಮ್ಮದೀ ಕಾಯ್ದೆ ಪ್ರಕಾರ ಕುಮಾರಯ್ಯ ಹೆಗ್ಗಡೇರು ಬಂಧನವನ್ನು ಕೂಡಾ ಅನುಭವಿಸಿದರು. ಇವರು ಕ್ರಿ. ಶ. ೧೮೩೦ನೇ ಸಪ್ಟಂಬರದಲ್ಲಿ ಮೃತರಾದರು. ಇವರಿಗೆ ಮಕ್ಕಳಿಲ್ಲದೆ ಚಂದಯ್ಯ, ಮಂಜಯ್ಯ ಎಂಬ ಇಬ್ಬರನ್ನು ದತ್ತಮಾಡಿಕೊಂಡರು.

ಚಂದಯ್ಯ ಹೆಗ್ಗಡೆಯವರು ಪಟ್ಟಕ್ಕೆ ಬಂದು, ದೇವಾಲಯದ ಒಳಗಿನ ಭಾಗವನ್ನು ಕಟ್ಟಿಸಿದರು. ದಾನ-ಧರ್ಮಗಳನ್ನು ಹೆಚ್ಚಿಸಿ ಸ್ಥಳದ ಮಹಿಮೆಯನ್ನು ಹರಡಿದರು. ಇವರು ಕ್ರಿ. ಶ. ೧೮೪೯ಕ್ಕೆ ದಿವಂಗತರಾದರು. ಇವರ ನಂತರ ಮಂಜಯ್ಯ ಹೆಗ್ಗಡೆಯವರು ಅಧಿಕಾರಕ್ಕೆ ಬಂದರು. ಚಂದಯ್ಯ ಹೆಗ್ಗಡೆಯವರಿಗೆ ಇಬ್ಬರು ಮಕ್ಕಳಿದ್ದರೂ, ೨ನೇ ದತ್ತದ ಅಧಿಕಾರಿ ಮಂಜಯ್ಯ ಹೆಗ್ಗಡೆಯವರೇ ಅಧಿಕಾರ ವಹಿಸಿದರು. ಇವರು ಬ್ರಾಹ್ಮಣರ ಛತ್ರವನ್ನೂ, ದೇವಾಲಯದ ಹೊರ ಸುತ್ತಿನ ಪ್ರಾಕಾರವನ್ನೂ, ಎದುರಿಗೆ ಎತ್ತರವಾದ ಗೋಪುರವನ್ನೂ, ಜನಾ ಉಗ್ರಾಣವನ್ನೂ ಕಟ್ಟಿಸಿದರು. ಮರದ ರಥವನ್ನೂ, ಚಿನ್ನ ಬೆಳ್ಳಿಗಳ ಆಭರಣ, ಲಾಲಕಿ, ಪಾಲಕಿಗಳನ್ನೂ ಮಾಡಿಸಿದರು. ಬಸ್ತಿಯ ಕಟ್ಟಡವನ್ನು ಜೀರ್ಣೋದ್ಧಾರಗೊಳಿಸಿದರು. ಕ್ಷೇತ್ರದ ಶುದ್ಧಿಗಾಗಿ ವಾಸ್ತುಹೋಮ ಬ್ರಹ್ಮಕಲಶವನ್ನು ಮಾಡಿಸಿದರು. ದೈವಗಳಿಗೆ ಮೂರು ಮಹಾ ಧರ್ಮ ನಡಾವಳಿಗಳನ್ನು ಕೊಟ್ಟರು. ಪೂಜೆ-ಉತ್ಸವಗಳನ್ನು ಹೆಚ್ಚಿಸಿದರು. ೪೫ ವರ್ಷಗಳ ಕಾಲ ಇದ್ದು ಕ್ರಿ. ಶ. ೧೮೯೫ಕ್ಕೆ ಮೃತರಾದರು. ಇವರಿಗೆ ಮಕ್ಕಳಿರಲಿಲ್ಲ. ಮೊದಲಿನ ಚಂದಯ್ಯ ಹೆಗ್ಗಡೆಯವರ ಮಗ ಕುಮಾರಯ್ಯ ಹೆಗ್ಗಡೆ ಮತ್ತು ಪತ್ನಿ ಲಕ್ಷ್ಮೀಮತಿ ಅಮ್ಮ ಇವರಿಗೆ ಧರ್ಮಪಾಲ ಎಂಬ ಮಗನಿದ್ದರು. ಇವರಿಗೆ ಪಟ್ಟವಾಯಿತು. ಇವರು ಒಂದೂವರೆ ವರ್ಷದಲ್ಲಿಯೇ ಅಂದರೆ ಕ್ರಿ. ಶ. ೧೮೯೬ನೇ ಕಾರ್ತಿಕ ಮಾಸದಲ್ಲಿ ಮೃತರಾದರು. ಇವರಿಗೆ ಮಕ್ಕಳಿರಲಿಲ್ಲ. ಇವರ ನಂತರ ಇವರ ತಾಯಿ ಲಕ್ಷ್ಮೀಮತಿ ಅಮ್ಮನು ವಿಟ್ಲ ಚೆಕ್ಕಿತ್ತಡಿ ಅಣ್ಣಿ ಯಾನೆ ಪದ್ಮಶೆಟ್ಟರ ಅಳಿಯ ೧೩ ವರ್ಷ ಪ್ರಾಯದ ಚಂದಪ್ಪ ಮತ್ತು ಪದ್ಮಶೆಟ್ಟರ ಮಗ ೮ ವರ್ಷ ಪ್ರಾಯದ ಮಂಜಪ್ಪ ಎಂಬ ಇಬ್ಬರನ್ನು ದತ್ತಮಾಡಿದರು. ಆ ದತ್ತಪತ್ರದ ಪ್ರಕಾರ ಮೊದಲಿನವರಾದ ಚಂದಯ್ಯ ಹೆಗ್ಗಡೆಯವರು ಪಟ್ಟಕ್ಕೆ ಬಂದರು. ಇವರು ಅಪ್ರಾಯಸ್ಥರಾದುದರಿಂದ ಸುಮಾರು ೬ ವರ್ಷಗಳ ಕಾಲದಲ್ಲಿ ಗುಂಡಿ ಪದ್ಮನಾಭ ಭಟ್ಟರು ಅಣ್ಣಿ ಯಾನೆ ಪದ್ಮಶೆಟ್ಟರು ಆಡಳಿತೆದಾರರಾಗಿ ಕಾರ್ಯನಿರ್ವಹಿಸಿದರು. ಆಡಳಿತೆದಾರರ ಕಾಲದಲ್ಲಿ ದೈವಗಳ ಗುಡಿಯನ್ನು ಹೊಸತಾಗಿ ಕಟ್ಟಿಸಿದರು. ಯಾತ್ರಿಕರಿಗೆ ವಸತಿಗಾಗಿ ಧರ್ಮ ಛತ್ರವನ್ನು ಕಟ್ಟಿಸಿದರು. ಆ ಮೇಲೆ ಚಂದಯ್ಯ ಹೆಗ್ಗಡೆಯವರು ಅಧಿಕಾರ ವಹಿಸಿದರು. ಇವರು ಬಸ್ತಿಗೆ ಪಂಚಕಲ್ಯಾಣವನ್ನೂ, ದೈವಗಳಿಗೆ ನಡಾವಳಿಯನ್ನೂ ಕೊಟ್ಟರು. ಜನಾ ಉಗ್ರಾಣದ ಕೆಳಗಿನ ಭಾಗವನ್ನು ಕಲ್ಲಿನಿಂದ ಕಟ್ಟಿಸಿದರು. ನಲ್ಲಿ ನೀರನ್ನು ಒದಗಿಸಿದರು. ೧೯೧೮ನೇ ಅಕ್ಟೋಬರದಲ್ಲಿ ಇವರು ದಿವಂಗತರಾದರು. (ಈಗ, ೧೯೫೫ನೇ ಸಪ್ಟಂಬರದಲ್ಲಿ ಧರ್ಮಸ್ಥಳದ ಹೆಗ್ಗಡೆಯಾಗಿ ಪಟ್ಟಕ್ಕೆ ಬಂದಿರುವ ಶ್ರೀ। ರತ್ನವರ್ಮ ರಾಜರೇ ಇವರ ಪುತ್ರ). ಚಂದಯ್ಯ ಹೆಗ್ಗಡೆಯವರ ನಂತರ ದತ್ತ ಕರಾರಿನಂತೆ ಶ್ರೀ। ಮಂಜಯ್ಯ ಹೆಗ್ಗಡೆಯವರು ಪಟ್ಟಕ್ಕೆ ಬಂದರು. ಇವರ ಕಾಲದಲ್ಲಿ ಕ್ಷೇತ್ರದ ಬಹುಮುಖವಾದ ಕಾರ್ಯಕಲಾಪಗಳು ವೃದ್ಧಿಯಾದವು. ಸಮಾಜದ ವಿವಿಧ ರಂಗಗಳಲ್ಲಿ ಭಾಗವಹಿಸಿ ಜನಪ್ರೀತಿಯನ್ನು ಗಳಿಸಿದರು. ಶ್ರೀ ಸ್ವಾಮಿಯನ್ನು ಅಚಲವಾದ ಭಕ್ತಿಯಿಂದ ನಂಬಿ ಕ್ಷೇತ್ರದ ಸರ್ವ ಕಾರ್ಯಗಳಲ್ಲಿಯೂ ಆಸಕ್ತಿ ವಹಿಸಿ ಸದಾ ಕಾಲವೂ ನಡೆಸುತ್ತಾ ಬಂದರು.

## ಶ್ರೀ। ಮಂಜಯ್ಯ ಹೆಗ್ಗಡೆಯವರು (ದಿವಂಗತ)

ಪುತ್ತೂರು ತಾಲೂಕಿನ ವಿಟ್ಲದಿಂದ ೩ ಮೈಲು ದೂರದ ಕೇಪು ಎಂಬಲ್ಲಿ ವಿರೋಧಿ ಸಂವತ್ಸರದ ವೃಶ್ಚಿಕ ಮಾಸದಲ್ಲಿ ಇವರು ಹುಟ್ಟಿದರು. ಇವರ ತಂದೆ ಅಣ್ಣಿ ಯಾನೆ ಪದ್ಮಶೆಟ್ಟರು. ತಾಯಿ ಅನಂತಮತಿ ಅಮ್ಮ. ತಾಯಿಯ ಮನೆ ಕೇಪು. ತಂದೆಯ ಮನೆ ವಿಟ್ಲ ಚೆಕ್ಕಿತ್ತಡಿ ಎಂಬುದು.

ಶ್ರೀ ಧರ್ಮಸ್ಥಳದ ಸರ್ವಧರ್ಮ ಸಮ್ಮೇಳನದ ರಜತೋತ್ಸವದಲ್ಲಿ
ಶ್ರೀ ಮಂಜುನಾಥಸ್ವಾಮಿಗೆ ವಂದಿಸಿ, ಸರ್ವರಿಗೂ ಶುಭ ಕೋರುವೆವು.





ಪ್ರೊಪ್ರೈಟರ್: ಎಸ್. ಎಲ್. ಶೇಟ್

ಎಸ್. ಎಲ್.
ಶೇಟ್
ಡಾಯಮಂಡ್
ಹೌಸ್
[illegible]
ರೋಡ್,
ಮಂಗಳೂರು-1.

ಆಫೀಸು ಸಮಯ:
ಬೆಳಿಗ್ಗೆ
9-30 ರಿಂದ 12-30
ಅಪರಾಹ್ನ
3 ರಿಂದ 8

Tele: GOLDKING



[illegible]
[illegible]
[illegible]

For Everything
in
**PHOTOGRAPHY**

**STUDIO BALCO**

HAMPANKATTA
MANGALORE.





ಶ್ರೀ ಧರ್ಮಸ್ಥಳದಲ್ಲಿ ನವರಾತ್ರಿ ಉತ್ಸವದ ಒಂದು ದೃಶ್ಯ
Navaratri Festival, Sri Dharmastal



ನವರಾತ್ರಿಯಲ್ಲಿ ಶ್ರೀಮಾನ್ ಹೆಗ್ಗಡೆಯವರು ಬ್ರಾಹ್ಮಣ ಸುವಾಸಿನಿಯರಿಗೆ ಸೀರೆ ಹಂಚುತ್ತಿರುವುದು
Presents of Saries to Brahmin ladies on Navaratri day

ಇವರು ೧೯೩೩ರಲ್ಲಿ ಆಯುರ್ವೇದ ಪರಿಷತ್ತನ್ನೂ, ಅಖಿಲ ಕರ್ನಾಟಕ ವಸ್ತು ಪ್ರದರ್ಶನವನ್ನೂ, ಕಲಾಪ್ರದರ್ಶನವನ್ನೂ ನಡೆಯಿಸಿದ್ದಲ್ಲದೆ ದೀಪೋತ್ಸವ ಸಂದರ್ಭದಲ್ಲಿ ಆ ವರ್ಷದಿಂದ ಈ ವರೇಗೂ ಸರ್ವ ಧರ್ಮ ಸಮ್ಮೇಲನವನ್ನೂ ನಡೆಯಿಸಿಕೊಂಡು ಬಂದರು. ಆ ಮೇಲೆ ೧೯೫೪ರಲ್ಲಿ ಈ ಸರ್ವಧರ್ಮ ಸಮ್ಮೇಳನದ ಬಗ್ಗೆ ಪ್ರತ್ಯೇಕವಾದ ಶಾಶ್ವತ ಸಭಾಭವನವೊಂದು, ದೇವಾಲಯದ ಎದುರಲ್ಲಿ ಕಟ್ಟಿಸಲ್ಪಟ್ಟಿತು. ೧೯೪೦ರಲ್ಲಿ ಉಜ್ರೆಯಲ್ಲಿ ಸಿದ್ಧವನ ಗುರುಕುಲವನ್ನು ಪ್ರಾರಂಭಿಸಿ, ಕನ್ನಡ, ಇಂಗ್ಲಿಷು, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ವಿದ್ಯಾಭ್ಯಾಸವನ್ನೂ, ಧಾರ್ಮಿಕ ಜ್ಞಾನವನ್ನೂ ಎಲ್ಲಾ ಮತದ ವಿದ್ಯಾರ್ಥಿಗಳಿಗೂ ಧರ್ಮಾರ್ಥವಾಗಿ ಕೊಡುವ ವ್ಯವಸ್ಥೆ ಮಾಡಿದರು. ೧೯೪೭ರಲ್ಲಿ ಕರ್ನಾಟಕ ವಿದ್ಯಾಲಯ ಎಂಬ ಪ್ರೌಢ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ, ಸ್ಥಳವನ್ನೂ ಹಣವನ್ನೂ ಕೊಟ್ಟದ್ದಲ್ಲದೆ 'ವಿದ್ಯಾನಿಲಯ'ವನ್ನೂ ಕಟ್ಟಿಸಿ ಕೊಟ್ಟರು. ಬುನಾದಿ ತರಬೇತಿ ಶಾಲೆಯನ್ನೂ ಅದಕ್ಕೆ ಬೇಕಾದ ಅನುಕೂಲತೆಗಳನ್ನೂ ಒದಗಿಸಿದರು; (ಅದನ್ನೀಗ ಸರಕಾರವು ನಡೆಸುತ್ತಿದೆ.) ದೇವಸ್ಥಾನಕ್ಕೆ ಬೇಕಾದ ಮರದ, ಬೆಳ್ಳಿಯ ವಾಹನಗಳನ್ನೂ ಹೆಚ್ಚಿಸಿದರು. ಯಾತ್ರಿಕರಿಗೆ ಎಲ್ಲರಿಗೂ ಅಕ್ಕಿಪಡಿಯಲ್ಲದೆ ಊಟವೂ ದೊರೆಯುವಂತೆ ಏರ್ಪಾಡು ಮಾಡಿದರು. ವಿದ್ಯುದ್ದೀಪಗಳನ್ನು ಹಾಕಿಸಿದರು. ಉದ್ಯಾನವನವನ್ನು ಮಾಡಿಸಿ, ಸುಂದರವಾದ ಕಟ್ಟೆಯನ್ನು ಕಟ್ಟಿಸಿದರು. ದೈವದೇವತೆಗಳಿಗೆ ಸಲ್ಲುತ್ತಿದ್ದ ರಕ್ತಾಹುತಿಯನ್ನು ನಿಲ್ಲಿಸಿ, ದೇವದಾಸಿ ಪದ್ಧತಿಯನ್ನು ತೆಗೆದುಹಾಕಿ, ಉತ್ಸವಗಳಲ್ಲಿ ಉರಿಸುತ್ತಿದ್ದ ದುರುಸು ಬಾಣಗಳನ್ನು ನಿಲ್ಲಿಸಿದರು. ಜಮಾ ಉಗ್ರಾಣದ ಎದುರು ಭಾಗವನ್ನೂ ಮೇಲ್ಭಾಗವನ್ನೂ ಕಟ್ಟಿಸಿದರು. ಯಾತ್ರಿಕರ ವಸತಿಗೆ ಹೊಸ ಕಟ್ಟಡಗಳನ್ನೂ, ನೇತ್ರಾವತಿ ನದಿಗೆ ಸೇತುವೆಯನ್ನೂ ಹಾಕಿಸಿದರು. ಸುತ್ತಲಿನ ಕಾಡನ್ನು ಕಡಿದು ಮಲೇರಿಯಾ ಬಾಧೆಯಿಂದ ಕ್ಷೀಣಿಸುತ್ತಿದ್ದ ಜನಸಂಖ್ಯೆಯನ್ನು ಉಳಿಸಿದರು. ಹಾಳುಬಿದ್ದ ಭೂಮಿಯಲ್ಲಿ ತೆಂಗಿನ, ಅಡಿಕೆಯ ತೋಟಗಳನ್ನು ಮಾಡಿಸಿದರು.

ಪೂರ್ವದಿಂದ ನಡೆದು ಬಂದ ದೇವಾಲಯದ ಕಾರ್ಯಗಳಿಗೆ ಯಾವ ಲೋಪವೂ ಬಾರದಂತೆ ಸ್ವತಃ ತಾನೇ ಮೇಲ್ವಿಚಾರ ವಹಿಸಿ, ಕಾಲೋಚಿತವಾದ ಜನಜೀವನದ ಪ್ರಗತಿಗೆ ಅನುಕೂಲವಿರುವ ಸಾಮಾಜಿಕ ಕಾರ್ಯಗಳನ್ನೂ ಮಾಡಿದರು. ೧೯೨೭ರಿಂದ ಇಪ್ಪತ್ತು ವರ್ಷಗಳಿಗೂ ಮೇಲ್ಪಟ್ಟು ಮದ್ರಾಸ್ ಶಾಸನಸಭಾ ಸದಸ್ಯರಾಗಿದ್ದವರು. ಜಿಲ್ಲೆಯ ನಾನಾ ಸಂಘ ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ, ಸಲಹೆಗಾರರಾಗಿ, ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ೧೯೪೩ರಲ್ಲಿ ಇವರ ಆಡಳಿತೆಯ ೨೫ ವರ್ಷಗಳ ಸ್ಮರಣಾರ್ಥ ಜನರು ರಜತೋತ್ಸವವನ್ನು ಆಚರಿಸಿದರು. ೧೯೫೦ರಲ್ಲಿ ಅವರ ಷಷ್ಟಿಪೂರ್ತಿಯ ಕಾಲದಲ್ಲಿ, ಸಮಗ್ರ ಕರ್ಣಾಟಕದ ಸಾಹಿತಿಗಳೂ ಉದಾರಿಗಳೂ ಸೇರಿ ಅವರಿಗೆ 'ಗ್ರಂಥ ಕಾಣಿಕೆ'ಯನ್ನರ್ಪಿಸಿ ಗೌರವಿಸಿದರು. ಅವರನ್ನು ಸತ್ಕರಿಸುವ ಸಮಾರಂಭಗಳು ಮಂಗಳೂರು, ಮೂಡಬಿದರೆ ಮೊದಲಾದ ಕಡೆಗಳಲ್ಲೂ ಜರಗಿದುವು. ೧೯೪೭ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಕಾಸರಗೋಡಿನಲ್ಲಿ ನಡೆದಾಗ ಅದರ ಸ್ವಾಗತಾಧ್ಯಕ್ಷರಾದರು. ಸಾಮಾಜಿಕ, ಧಾರ್ಮಿಕ ಕಲಾರಂಗಗಳಲ್ಲಿ ಶ್ರಮವಹಿಸಿ ದುಡಿದು, ಜನತೆಗೆ ಆದರ್ಶಪ್ರಾಯರೆನಿಸಿದರು.

೧೯೫೧ರಲ್ಲಿ ಶ್ರೀ। ಹೆಗ್ಗಡೆಯವರು, ನೇತ್ರಚಿಕಿತ್ಸಾಪ್ರವೀಣರಾದ ಡಾ। ಮೋದಿಯವರನ್ನು ಧರ್ಮಸ್ಥಳಕ್ಕೆ ಆಹ್ವಾನಿಸಿ, ಸುಮಾರು ೩ ವಾರಗಳ ಶಿಬಿರ ನಡೆಸಿ, ನೂರಾರು ಜನರಿಗೆ ದೃಷ್ಟಿದಾನ ಮಾಡಿಸುವಂಥ ಮಹತ್ಕಾರ್ಯವನ್ನು ಮಾಡಿದರೆಂಬುದು ಚಿರಸ್ಮರಣೀಯವಿದೆ. ಇದೇ ೧೯೫೪ನೇ ನವಂಬರ ತಿಂಗಳಲ್ಲಿ ಮೋಟಾರು ವಾಹನದ ಮೂಲಕ "ಚಲಿಸುವ ಆಸ್ಪತ್ರೆ"ಯನ್ನೇರ್ಪಡಿಸಿ, ಧರ್ಮಸ್ಥಳದ ಆಸುಪಾಸಿನ ಹಳ್ಳಿಗಳಿಗೆ, ಬಡ ರೋಗಿಗಳಿಗೆ ಮನೆಬಾಗಿಲಿಗೇ ವೈದ್ಯಕೀಯ ಸಹಾಯವು ತಲಪುವಂತೆ ಏರ್ಪಾಡು ಮಾಡಿದ್ದರು.

ಶ್ರೀ। ಮಂಜಯ್ಯ ಹೆಗ್ಗಡೆಯವರು ಸುಶಿಕ್ಷಿತರಿರುವಂತೆ ದಯಾಳುಗಳೂ ಆಗಿದ್ದರು. ಶಿರಸ್ಸೂ ಹೃದಯವೂ ಸದಾ ಮಿಲನಹೊಂದಿ, ಪ್ರತಿಭೆಯೊಂದಿಗೆ ಔದಾರ್ಯ—ದಯೆ—ಸಹೋದರ ಪ್ರೇಮಗಳನ್ನೂ

ಪ್ರಚೋದಿಸುವವರಾಗಿದ್ದರು. ಲಲಿತಕಲೆಗಳ ಉಪಾಸಕರಾಗಿದ್ದರು. ಸಂಗೀತ, ನಾಟ್ಯ, ಅಭಿನಯಗಳಲ್ಲಿ ಉತ್ತಮವಾದುದನ್ನು ಮೆಚ್ಚುವವರಾಗಿದ್ದರು. ಪ್ರಗತಿಪರ ಕಾರ್ಯಗಳಲ್ಲಿ ಪ್ರೇರಕರು; ಪ್ರೋತ್ಸಾಹಕರು. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳಲ್ಲಿ ನಿಷ್ಣಾತರು. ಅವರೊಂದು ಸಂಸ್ಥೆ—ಎಂದರೆ ಅತಿಶಯೋಕ್ತಿಯಾಗಲಾರದು.

ನಿಧನ: ಶ್ರೀ। ಮಂಜಯ್ಯ ಹೆಗ್ಗಡೆಯವರು, 1955ನೇ ಆಗೋಸ್ತು ತಾ. 31ರಂದು ರಾತ್ರೆ 10-5ಕ್ಕೆ, ಶ್ರೀಕ್ಷೇತ್ರ ಧರ್ಮಸ್ಥಳದಲ್ಲಿ, ದಿ॥ ಚಂದಯ ಹೆಗ್ಗಡೆಯವರ ಪುತ್ರ ಶ್ರೀ। ರತ್ನವರ್ಮರಾಜರವರಿಗೆ ಅಧಿಕಾರ ವಹಿಸಿಕೊಟ್ಟು, ದಿವಂಗತರಾದರು.

## ಶ್ರೀ। ರತ್ನವರ್ಮ ಹೆಗ್ಗಡೆಯವರು

ಶ್ರೀ। ರತ್ನವರ್ಮ ಹೆಗ್ಗಡೆಯವರು, 1918ನೇ ಅಕ್ಟೋಬರದಲ್ಲಿ ದಿವಂಗತರಾದ, ಶ್ರೀ। ಚಂದಯ್ಯ ಹೆಗ್ಗಡೆಯವರ ಏಕಮಾತ್ರ ಪುತ್ರ. ಶ್ರೀ ಧರ್ಮಸ್ಥಳದ ಹೆಗ್ಗಡೆಯವರಾಗಿ ಇವರ ಪಟ್ಟಾಭಿಷೇಕ ಮಹೋತ್ಸವವು ತಾ. 13—9—1955ರಲ್ಲಿ ಶ್ರೀಕ್ಷೇತ್ರ ಧರ್ಮಸ್ಥಳದಲ್ಲಿ ವಿಧ್ಯುಕ್ತ ಕಾರ್ಯಕ್ರಮಗಳಿಂದ ನೆರವೇರಿತು. ಶ್ರೀ। ರತ್ನವರ್ಮ ಹೆಗ್ಗಡೆಯವರು ಕ್ಷೇತ್ರದ ಧರ್ಮಕಾರ್ಯಗಳಲ್ಲಿ ಶ್ರದ್ಧೆಯಿಂದಲೂ ಕಾರ್ಯಕ್ಷಮತೆಯಿಂದಲೂ ತೊಡಗಿರುವರು. ಇವರು ದೇವಸ್ಥಾನದ ಹೂದೋಟದ ಮತ್ತು ಕೆರೆಯ ಸುತ್ತಲೂ ಕಲ್ಲಿನ ಆವರಣಗಳನ್ನು ಕಟ್ಟಿಸಿದರು. ಯಾತ್ರಿಕರಿಗೆ ಅನುಕೂಲವಾಗುವಂತೆ ಕೊಠಡಿಗಳನ್ನು ಕಟ್ಟಿಸಿದರು. ಈಗಲೂ ಕಟ್ಟಿಸುತ್ತಿದ್ದಾರೆ. ದಿ। ಮಂಜಯ್ಯ ಹೆಗ್ಗಡೆಯವರು ಮಾಡಿಸುತ್ತಿದ್ದ ಬೆಳ್ಳಿಯ ರಥವನ್ನೂ ವಸಂತಮಹಲನ್ನೂ ಇವರು ಪೂರ್ಣಗೊಳಿಸಿ, ಕಳೆದ 1955ನೇ ಇಸವಿ ದೀಪೋತ್ಸವದ ಸಮಯ ಬೆಳ್ಳಿಯ ರಥವನ್ನು ಶ್ರೀ ಸ್ವಾಮಿಗೊಪ್ಪಿಸಿ, ಅತಿ ವಿಜೃಂಭಣೆಯಿಂದ ರಥೋತ್ಸವವನ್ನು ಮಾಡಿಸಿದರು. ಅದೇ ವರ್ಷ ವಸಂತ ಮಹಲಿನಲ್ಲಿ ಸರ್ವಧರ್ಮ ಸಮ್ಮೇಳನವನ್ನು ನಡೆಸಿದರು. 1956ನೇ ಇಸವಿ ಫೆಬ್ರವರಿ ತಿಂಗಳಲ್ಲಿ ವೇಣೂರು ಶ್ರೀಬಾಹುಬಲಿ ಸ್ವಾಮಿಗೆ ೫೦೮ ಕಲಶಗಳ ಅಭಿಷೇಕವನ್ನು ಅತಿ ವಿಜೃಂಭಣೆಯಿಂದ ಮಾಡಿಸಿದ್ದಲ್ಲದೆ, ಬಾಹುಬಲಿ ಸ್ವಾಮಿಯ ಮುಂಗಡೆ ಜೀರ್ಣವಾಗಿದ್ದ ಅಕ್ಕಪಕ್ಕದ ಬಸದಿಗಳನ್ನು ಜೀರ್ಣೋದ್ಧಾರಗೊಳಿಸಿದರು. ಬೀಡನ್ನು ದುರಸ್ತಿಪಡಿಸಿದುದಲ್ಲದೆ ಅದರ ಮುಂಭಾಗವನ್ನು ಅತಿ ಅಂದವಾಗಿ ಕಾಂಕ್ರಿಟಿನಿಂದ ಕಟ್ಟಿಸಿದರು. ದೇವಸ್ಥಾನದ ಮಂಟಪ ಹಾಗೂ ಗೋಪುರಗಳಿಗೆ ಸಿಮೆಂಟಿನ ಬಣ್ಣದ ಇಟ್ಟಿಗೆಗಳನ್ನು ಹಾಕಿಸಿ ಅಂದವಾಗಿ ಮಾಡಿದರು. ಶ್ರೀ ಗಣಪತಿ ದೇವರ ಬಾಗಿಲಿಗೆ ಬೆಳ್ಳಿ ಮಡಾಯಿಸುವ ಕೆಲಸವನ್ನು ಈಗ ಮಾಡಿಸುತ್ತಿದ್ದಾರೆ. ಇದೇ ರೀತಿ ಕ್ಷೇತ್ರದ ಅಭಿವೃದ್ಧಿಯ ಹಲವು ಕಾರ್ಯಗಳು ಶ್ರೀ। ರತ್ನವರ್ಮ ಹೆಗ್ಗಡೆಯವರಿಂದ ಈಗ ನಡೆಯುತ್ತಿವೆ. ಈ ವರ್ಷ (1957) ಮೈಸೂರು ವಿಧಾನ ಸಭೆಗೆ ಬೆಳ್ತಂಗಡಿ ಮತದಾರ ಕ್ಷೇತ್ರದಿಂದ ಕೊಂಗ್ರೆಸ್ ಪರವಾಗಿ ಸದಸ್ಯರಾಗಿ ಚುನಾಯಿತರಾಗಿರುವರು. ದೇವಾಲಯದ ಸುತ್ತಲೂ, ಮುಂದೆ ವಸಂತಮಹಲ್ ವರೆಗೂ ಡಾಮರು ಹಾಕಿಸಲ್ಪಟ್ಟಿದೆ. ಶ್ರೀ ಧರ್ಮಸ್ಥಳಕ್ಕೆ ನೇತ್ರಾವತಿ ನದಿ ದಾಟುವಲ್ಲಿ ಇರುವ ಕೊಂಕ್ರೀಟ್ ದಾರಿಯು ಕೆಲವೊಮ್ಮೆ ಅತಿವೃಷ್ಟಿಯಾದರೆ ಮುಚ್ಚಿಹೋಗುವ ಸಂಭವವಿರುವುದರಿಂದ, ನೇತ್ರಾವತಿ ನದಿಗೆ ಎತ್ತರವಾದ ಸೇತುವೆಯನ್ನು ರಚಿಸುವಂತೆ ಯತ್ನಿಸುತ್ತಿರುವರು. ಮೈಸೂರು ಸರಕಾರದ ಮಲೆನಾಡು ಅಭಿವೃದ್ಧಿ ಸಮಿತಿಯಲ್ಲಿ ಶ್ರೀ। ರತ್ನವರ್ಮ ಹೆಗ್ಗಡೆಯವರು ಸದಸ್ಯರಾಗಿಯೂ ಸೇವೆಸಲ್ಲಿಸುತ್ತಿರುವರು. ಸಾಹಿತ್ಯ, ಲಲಿತಕಲೆಗಳಿಗೆ ಪ್ರೋತ್ಸಾಹಕೊಟ್ಟಿರುವರು, ಕೊಡುತ್ತಿರುವರು. ಅನೇಕ ಸಾರ್ವಜನಿಕ ಕಾರ್ಯಗಳಲ್ಲೂ ಧುರೀಣತೆ ವಹಿಸುತ್ತಿರುವರು. ಹಲವು ಸಭೆಗಳಲ್ಲಿ ಅಧ್ಯಕ್ಷತೆ ವಹಿಸಿಯೂ ಪ್ರೋತ್ಸಾಹಿಸಿರುವರು. ಕೇವಲ ಎರಡು ವರ್ಷಗಳಲ್ಲಿ ಇವರು ಬಹುತರವಾಗಿ ಸುಧಾರಣೆಗಳನ್ನೂ ಬದಲಾವಣೆಗಳನ್ನೂ ಮಾಡಿರುವರು.

# ದೇವಸ್ಥಾನ

ಈ ಸ್ಥಳದಲ್ಲಿ ದೇವರಿಗೆ ಹರಿಕೆ, ಕಾಣಿಕೆ ಮತ್ತು ಸೇವೆಗಳನ್ನು ಮಾಡಿಸಬೇಕೆಂಬುದಾಗಿ ಯಾರೂ ಒತ್ತಾಸೆ ಮಾಡುವಂತಿಲ್ಲ. ಕ್ಷೇತ್ರದಲ್ಲಿ ಇಂಥ ಧರ್ಮ ಸೇವೆ ಮಾಡಿರಿ, ಅಂಥ ಧರ್ಮಕಾರ್ಯವನ್ನು ಮಾಡಿಸಬೇಕೆಂದು ಕೇಳುವ ಸಂಪ್ರದಾಯ ಇರುವುದಿಲ್ಲ. ಭಕ್ತರು ತಾವಾಗಿ ತಮ್ಮ ಅಭಿಪ್ರಾಯವನ್ನು ಸೂಚಿಸುವಲ್ಲಿ ಮಾತ್ರ ಇಂಥ ರೀತಿಯಲ್ಲಿ ವರ್ತಿಸಬೇಕೆಂದು ತಿಳಿಸುವದುಂಟು.

ಎಷ್ಟೋ ಜನರು ಭಕ್ತಿಯಿಂದ ಶ್ರೀ ಸ್ವಾಮಿಯನ್ನು ನಂಬಿ ತಮ್ಮ ಇಷ್ಟಾರ್ಥಗಳನ್ನು ಹಲವು ರೀತಿಯಲ್ಲಿ ಹೊಂದಿ ಕೃತಾರ್ಥರಾಗಿದ್ದಾರೆ—ಆಗುತ್ತಲಿದ್ದಾರೆ. ಇದಕ್ಕೆಲ್ಲಾ ಶ್ರೀ ಸ್ವಾಮಿಯಲ್ಲಿಯೂ, ಶ್ರೀ ಕ್ಷೇತ್ರದಲ್ಲಿಯೂ ಇರತಕ್ಕ ಕಡುತರವಾದ ವಿಶ್ವಾಸವೂ ಭಕ್ತಿಯೂ ಕಾರಣವಾಗಿದೆ. ತಾವು ಹೇಳಿಕೊಡುವ ಕಾಣಿಕೆಗಿಂತಲೂ ಅವರವರ ಶ್ರದ್ಧೆಯೇ ಮುಖ್ಯ. ಕಾಣಿಕೆ—ಹರಿಕೆ ಎಂಬುದು ಶ್ರೀ ದೇವರಲ್ಲಿ ಇರತಕ್ಕ ಶ್ರದ್ಧೆ, ವಿಶ್ವಾಸಕ್ಕೆ ಬೇಕಾದ ತಮ್ಮ ತ್ಯಾಗಬುದ್ಧಿಯ ಒಂದು ಕುರುಹು ಎಂದು ತಿಳಿಯಬೇಕು. ಭಕ್ತಿಯೂ ತ್ಯಾಗವೂ ಕೂಡಿಕೊಂಡಿದ್ದರೇನೇ ಕಾರ್ಯಸಿದ್ಧಿ ಇದೆ ಎಂಬುದನ್ನು ತಿಳಿಯಬೇಕು. ತ್ಯಾಗ ಎಂದರೆ ಧನಕನಕಾದಿ ವಸ್ತುಗಳನ್ನು ಅವರವರ ಶಕ್ತಿಗನುಸಾರವಾಗಿ ಅರ್ಪಿಸುವುದು ಮಾತ್ರವಲ್ಲ, ತಮ್ಮ ಶರೀರ ಸುಖಾದಿಗಳನ್ನು ಮತ್ತು ಸಂಬಂಧಪಟ್ಟ ಇತರ ಸಾಧನಗಳ ತ್ಯಾಗವು ಕೂಡಾ ಆಗಿರುವುದು. ಇಂಥ ತ್ಯಾಗಬುದ್ಧಿಯನ್ನು ಬಡ ತಿರುಕನಿಂದ ಮೊದಲ್ಗೊಂಡು ಶ್ರೀಮಂತನಾದ ರಾಜಾಧಿರಾಜನ ವರೆಗೂ ಆಚರಿಸಬಹುದು.

ದೇವರಿಗೆಂದು ಅರ್ಪಿಸುವಂಥ ಭಕ್ತರ ತ್ಯಾಗ ಸಾಧನ ದ್ರವ್ಯವು ಧರ್ಮ ಪ್ರಭಾವನೆಗೂ, ಜನರ ಪ್ರಯೋಜನಕ್ಕೂ ಉಪಯೋಗಿಸಲ್ಪಡುವುದು ದೇವರಿಗೂ ಪ್ರೀತಿ; ಜನರಿಗೂ ಶಾಂತಿ. ದೇವಸ್ಥಾನದಲ್ಲಿ ದೇವರ ಸಾನ್ನಿಧ್ಯವಿದೆಯೆಂಬ ಶ್ರದ್ಧೆಯನ್ನಿಟ್ಟುಕೊಂಡು ದೇವರ ದರ್ಶನ ಮಾಡಬೇಕು. ದೇವಸ್ಥಾನದಲ್ಲಿ ನಮ್ಮ ಶರೀರದ ಬಾಹ್ಯ ನಿರ್ಮಲತೆಯನ್ನು ಇಟ್ಟುಕೊಂಡು ಕ್ರೋಧ, ಅಹಂಕಾರಾದಿ ಕೆಟ್ಟ ಭಾವನೆಗಳಿಲ್ಲದ ಶಾಂತ ಮತ್ತು ನಿರ್ಮಲ ಮನಸ್ಸುಳ್ಳವರಾಗಿ ಶ್ರೀ ಸ್ವಾಮಿ ಸನ್ನಿಧಿಯಲ್ಲಿದ್ದು ಸೇವೆ ಸಲ್ಲಿಸಿ ಪ್ರಾರ್ಥಿಸಿಕೊಳ್ಳುವಲ್ಲಿ, ಅವರವರ ಶ್ರದ್ಧಾಭಕ್ತಿಗಳಿಗನುಸರಿಸಿ ಫಲ ಸಿಕ್ಕುವುದು ನಿಸ್ಸಂದೇಹ.

ಈ ಸ್ಥಳದ ಕೀರ್ತಿಯು ಮೊದಲಿನಿಂದಲೂ ಕನ್ನಡ ನಾಡಿನಲ್ಲೆಲ್ಲ ಹರಡಿದೆ. ಇಂದು, ಜನರ ವಿಶ್ವಾಸವೂ ಭಕ್ತಿಯೂ ವೃದ್ಧಿ ಆಗುತ್ತಾ ಬರುತ್ತಿರುವುದು ಶ್ರೀ ಸ್ಥಳದ ಮಹತ್ವವು. ಪೈಶಾಚಗ್ರಸ್ತರು, ಮೋಸ ಮಾಡಲ್ಪಟ್ಟವರು, ಸಂಕಷ್ಟ ಹೊಂದಿದವರು ಎಲ್ಲವರೂ ಭಕ್ತಿ ವಿಶ್ವಾಸವಿಟ್ಟು ದೇವರ ದರ್ಶನ ಮಾಡಿ ಕೃತಾರ್ಥರಾಗುವುದು ಅನುಭವಸಿದ್ಧ. ಇಲ್ಲಿಗೆ ಸದಾ ಬಡವರು, ದೊಡ್ಡವರು, ಪಂಡಿತರು, ವಿದ್ವಾಂಸರು, ರಾಜರುಗಳು ಮೊದಲಾದವರು ಎಲ್ಲವರೂ ಬಂದು ದೇವರ ದಯೆಗೆ ಪಾತ್ರರಾಗುತ್ತಿರುವರು.

**ದೇವಸ್ಥಾನದ ನಿತ್ಯದ ಕಾರ್ಯಗಳು:**—ನಿತ್ಯದಲ್ಲಿ ಶ್ರೀ ಮಂಜುನಾಥ ದೇವರಲ್ಲಿ ಬೆಳಗ್ಗೆ ಪವಮಾನಾದಿ ಪೂಜೆ, ಪಂಚಾಮೃತಾಭಿಷೇಕ, ಏಕಾದಶ ರುದ್ರಪಾರಾಯಣ, ನಾಲ್ಕು ವೇದಗಳ ಪಾರಾಯಣ, ಸಹಸ್ರನಾಮಪೂರ್ವಕ ಬಿಲ್ವಾರ್ಚನೆ, ಶತಜಪ, ಗಂಧಜಪ, ಅಂಗಪ್ರದಕ್ಷಿಣೆ ಮೊದಲಾದ ವಿಧಿಪೂರ್ವಕ ಕ್ರಿಯೆಗಳೂ, ದೇವತೆಗಳೂ ಸಹಾ ಕೂಡಿ ಅಮ್ಮನವರಲ್ಲಿ ಪೂಜೆಗಳು, ಪವಮಾನ ಪೂಜೆ, ದೇವಿಮಹಾತ್ಮೆಪಾರಾಯಣ, ಸಹಸ್ರನಾಮ ಪೂಜೆ, ಮಹಾಪೂಜೆಗಳೆಲ್ಲಾ ನಡೆಯುವವು. ಗಣಪತಿ ದೇವರಲ್ಲಿ, ಅಣ್ಣಪ್ಪ ಸ್ವಾಮಿಯಲ್ಲಿ

ಕೂಡಾ ವಿವಿಧ ಪೂಜೆಗಳು ನಡೆಸಲ್ಪಡುವುವು. ಬೇರೆ ಬೇರೆ ದೇವರುಗಳಿಗೆ ಬೇರೆ ಬೇರೆ ಅರ್ಚಕರು ಇರುತ್ತಾರೆ. ಶ್ರೀ ಮಂಜುನಾಥ ದೇವರಲ್ಲಿಯೂ, ಅಮ್ಮನವರಲ್ಲಿಯೂ, ೧೦ ದಿವಸಕ್ಕೊಬ್ಬರಂತೆ ಅರ್ಚಕರು ಇರುತ್ತಾರೆ. ಈ ಪೂಜೆಯವರು ರಾತ್ರಿ ದೇವಸ್ಥಾನದಲ್ಲಿಯೇ ಮಲಗಬೇಕಾಗಿರುತ್ತದೆ.

**ಯಾತ್ರಿಕರಿಗೆ ಕೆಲವು ಅನುಭವಗಳು:**—ಶ್ರೀ ಧರ್ಮಸ್ಥಳ ಕ್ಷೇತ್ರಕ್ಕೆ ಬರುವ ಯಾತ್ರಿಕರು ಸ್ಥಳವನ್ನು ಸೇರಿದ ಮೇಲೆ ದೇವಸ್ಥಾನದ ಪಾರುಪತ್ಯಗಾರರಿಂದ ಬಿಡಾರದ ಮತ್ತು ಊಟದ ಏರ್ಪಾಡನ್ನು ಕೇಳಿ ತಿಳಿದುಕೊಂಡು, ಬಿಡಾರದಲ್ಲಿಳಿದುಕೊಂಡು, ಅಡಿಗೆ ಮಾಡಿಕೊಳ್ಳುವವರಿಗೆ ಅಕ್ಕಿ ಸಾಮಾನು ಅಥವಾ ಊಟ ಮಾಡುವವರಿಗೆ ಊಟದ ಚೀಟಿ ತೆಗೆದುಕೊಳ್ಳಬೇಕು. ಹೊಳೆಯಲ್ಲಿ ಹೋಗಿ ಸ್ನಾನ ಮಾಡಬಹುದು ಅಥವಾ ಹೂವಿನ ತೋಟದಲ್ಲಿ ಸ್ನಾನ, ಬಟ್ಟೆ ಒಗೆಯುವುದು ವಗೈರೆ ಮಾಡಿಕೊಳ್ಳಬಹುದು. ಬೆಳಿಗ್ಗೆ ಘಂಟೆ ೯ರಿಂದ ೧೧ರ ಒಳಗಾಗಿ ದೇವಸ್ಥಾನದ ಪಾರುಪತ್ಯಗಾರರಿಂದ ಶ್ರೀ ಸ್ವಾಮಿಗೆ ಮಾಡಬೇಕಾದ ಸೇವೆಯ ಬಗ್ಗೆ ಹಣವನ್ನು ಕೊಟ್ಟು ಚೀಟು ಪಡಕೊಂಡು, ದೇವಸ್ಥಾನದ ಇದಿರಿಗೆ ಇರುವ ಹಣ್ಣುಕಾಯಿ ಅಂಗಡಿಗೆ ಹೋಗಿ ಹಣ್ಣುಕಾಯಿ ತೆಗೆದುಕೊಂಡು ಪೂಜೆಯ ಸಮಯಕ್ಕೆ ದೇವಸ್ಥಾನಕ್ಕೆ ಹೋಗುವುದು. ದೇವಸ್ಥಾನದ ಒಳಗೆ ಎರಡು ಪ್ರಾಕಾರಗಳಿವೆ. ಒಳಗಿನ ಪ್ರಾಕಾರಕ್ಕೆ ಹೋಗುವವರು ಸ್ನಾನ ಮಾಡಿ ಬಟ್ಟೆ ಉಟ್ಟುಕೊಂಡು, ಶಾಲು ಹೊದ್ದುಕೊಂಡು ಹೋಗಬಹುದು. ಅಂಗಿ ಹಾಕಿಕೊಂಡು ಒಳಗೆ ಹೋಗಬಾರದು. ಇದೆಲ್ಲಾ ನಮ ದಾಕ್ಷಿಣಾತ್ಯ ಹಿಂದೂಗಳು ಆಚರಿಸುವ ಸಂಪ್ರದಾಯಬದ್ಧವಾದ ನಡತೆಗಳು.

ಸಣ್ಣ ಮಕ್ಕಳನ್ನು, ಕಜ್ಜಿಹುಣ್ಣು ಇರುವವರನ್ನು, ರೋಗಿಗಳನ್ನು ಒಳಗಡೆ, ಎಂಜಲು, ರಕ್ತ, ಮೂತ್ರ ಇತ್ಯಾದಿ ಬೀಳಬಾರದೆಂಬ ಬಗ್ಗೆ ಹೋಗಬಿಡುವುದಿಲ್ಲ. ಆಣೆ ಮಾತುಕಥೆ ತೀರ್ಮಾನಗಳು ಇದ್ದರೆ ಪೂಜೆಗೆ ಮುಂದಾಗಿ ಶ್ರೀ। ಹೆಗ್ಗಡೆಯವರಿಗೆ ತಿಳಿಸಿದರೆ ಅವರು ತಕ್ಕ ಏರ್ಪಾಡು ಮಾಡುವರು. ಕಾಣಿಕೆ ಪ್ರಾರ್ಥನೆ ಇರುವವರು ಪೂಜೆಯ ಸಮಯ ದೇವರ ಬಾಗಿಲಿನಲ್ಲಿ ಇರುವ ಹರಿವಾಣದಲ್ಲಿ ಹರಿಕೆ, ಕಾಣಿಕೆ ಹಾಕಿ ಪ್ರಾರ್ಥನೆಯ ವಿಚಾರವನ್ನು ಹೆಗ್ಗಡೆಯವರಿಗೆ ಅಥವಾ ಹರಿವಾಣದ ಬಳಿಯಲ್ಲಿ ಹೆಗ್ಗಡೆಯವರ ಅನುಮತಿ ಪ್ರಕಾರ ನಿಂತಿರುವವರಿಗೆ ತಿಳಿಸಿ, ಅವರು ಹೇಳುವಂತೆ ಶ್ರದ್ಧೆಯಿಂದ ನಡಕೊಳ್ಳುವುದು. ಬಿಡಾರಕ್ಕೆ ಅಕ್ಕಿ ಸಾಮಾನಿಗೆ ಅಥವಾ ಊಟಕ್ಕೆ ಹೀಗೆ ಯಾವದೇ ವಿಚಾರಕ್ಕೆ ಅದಕ್ಕೆ ಸಂಬಂಧಪಟ್ಟ ನೌಕರರಿಂದ ಅನುಕೂಲ ಒದಗಿಸಿಕೊಳ್ಳಬಹುದು. ಅನುಕೂಲವಾಗದಿದ್ದರೆ ಶ್ರೀ ಹೆಗ್ಗಡೆಯವರಿಗೆ ತಿಳಿಸಿದರೆ ಎಲ್ಲವೂ ಸುಸೂತ್ರವಾಗುವುದು. ಪಂಚಾಮೃತಾಭಿಷೇಕ, ಕ್ಷೀರಾಭಿಷೇಕ, ತುಲಾಭಾರ, ಶತರುದ್ರಾಭಿಷೇಕ, ಮಾತುಕತೆ ತೀರ್ಮಾನ, ವಿಶೇಷ ಪೂಜೆ, ಉತ್ಸವಗಳು ಇತ್ಯಾದಿಗಳು ಆಗಬೇಕಾಗಿದ್ದರೆ ಮಧ್ಯಾಹ್ನದ ಪೂಜೆಗಿಂತ ಮೊದಲೇ ಅಂದರೆ ಬೆಳಿಗ್ಯೆ ೮ ಘಂಟೆಗೆ ದೇವಸ್ಥಾನದ ಮಣೆಗಾರರಿಗೆ ತಿಳಿಸಬೇಕು. ಶಾಶ್ವತವಾದ ಯಾವದಾದರೂ ಸೇವೆಗಳು ನಡೆಯಬೇಕಾದಲ್ಲಿ ಶ್ರೀ। ಹೆಗ್ಗಡೆಯವರಲ್ಲಿ ಮಾತಾಡಬೇಕು.

ಶ್ರೀ ಧರ್ಮಸ್ಥಳದ ಮಂಜುನಾಥ ಸ್ವಾಮಿಯ, ಅಣ್ಣಪ್ಪ ಸ್ವಾಮಿಯ ಹರಿಕೆ–ಕಾಣಿಕೆಗಳನ್ನು ಯಾರೊಬ್ಬರೂ ಇನ್ನೊಬ್ಬರ ವಶ ಕೊಡಬಾರದು. ಸ್ಥಳದಿಂದ ಶ್ರೀ। ಹೆಗ್ಗಡೆಯವರೇ ಕಳುಹಿಸಿದ್ದರೆಂದು ಹೇಳಿ ಇಲ್ಲಿನ ಹರಿಕೆ—ಕಾಣಿಕೆಗಳನ್ನು ಯಾರು ಕೇಳಿದರೂ ಕೊಡಬಾರದು. ಯಾಕೆಂದರೆ ಹೀಗೆ ಸ್ಥಳದಿಂದ ಕಳುಹಿಸುವ ಪದ್ಧತಿಯಿಲ್ಲ. ಸ್ಥಳಕ್ಕೆ ಬರಲಿಕ್ಕೆ ಸಾಧ್ಯವಾಗದಾಗ ಸ್ವತಹಾ ಬಂದು ಹರಿಕೆ— ಕಾಣಿಕೆಗಳನ್ನು ಒಪ್ಪಿಸುವುದೇ ಒಳ್ಳೆಯದು. ಬರಲಿಕ್ಕೆ ಅಸಾಧ್ಯವಾದಾಗ ಶ್ರೀ। ಹೆಗ್ಗಡೆಯವರ ವಿಳಾಸಕ್ಕೆ ಅಥವಾ ಶ್ರೀ ಸ್ವಾಮಿಯ ಹೆಸರಿಗೆ ಮನಿಯಾರ್ಡರು ಮಾಡಿ ಕಳುಹಿಸಬಹುದು. ಪೋಸ್ಟು: ಧರ್ಮಸ್ಥಳ (ದಕ್ಷಿಣ ಕನ್ನಡ).

---

# ದೇವಸ್ಥಾನದ ವಿಶೇಷ ಉತ್ಸವಗಳು

೧. **ದೀಪೋತ್ಸವ:** ಪ್ರತಿ ವರ್ಷವೂ ಕಾರ್ತಿಕ ಬಹುಳ ದಶಮಿಯಿಂದ ಅಮಾವಾಸ್ಯೆಯ ವರೆಗೆ ೫ ದಿವಸಗಳಲ್ಲಿ ಲಕ್ಷದೀಪೋತ್ಸವವು ಬಹಳ ವಿಜೃಂಭಣೆಯಿಂದ ಜರಗುವುದು. ಕೊನೆಯ ೨ ದಿವಸಗಳಲ್ಲಿ ಸಂಜೆ ವಿವಿಧ ಧರ್ಮಸಮ್ಮೇಳನವೂ ಸಾಹಿತ್ಯ ಗೋಷ್ಠಿಯೂ ನಡೆಯುವುವು.

೨ **ಕಾಲಾವಧಿ ಜಾತ್ರೆ:** ಪ್ರತಿವರ್ಷವೂ ಮೇಷ ಸಂಕ್ರಮಣ ದಿವಸ ಧ್ವಜಾರೋಹಣವಾಗಿ, ಧರ್ಮದೇವತೆಗಳಿಗೆ ಪೂಜೋತ್ಸವಗಳೂ, ಶ್ರೀಸ್ವಾಮಿಗೆ ರಥೋತ್ಸವವೂ ಇತರ ದೇವತಾ ವಿನಿಯೋಗಾದಿಗಳೂ ೯ ದಿವಸಗಳ ವರೆಗೆ ನಡೆಯುವುವು.

೩. **ನವರಾತ್ರಿ ಉತ್ಸವ:** ಪ್ರತಿ ವರ್ಷವೂ ನವರಾತ್ರಿಯಲ್ಲಿ ಅಮ್ಮನವರಿಗೆ ಉತ್ಸವ, ಬ್ರಾಹ್ಮಣ ಸಂತರ್ಪಣೆ ಮತ್ತು ಕೊನೆಯ ದಿನ ಬ್ರಾಹ್ಮಣ ಮುತ್ತೈದೆಯರಿಗೆ ಶೀರೆಗಳು ಧರ್ಮವಾಗಿ ಕೊಡಲ್ಪಡುವುವು.

೪. **ಶಿವರಾತ್ರಿ ಉತ್ಸವ:** ಶಿವರಾತ್ರಿಯಲ್ಲಿ ಶ್ರೀಸ್ವಾಮಿಗೆ ರಥೋತ್ಸವವೂ ಶಿವರಾತ್ರಿ ಬೆಟ್ಟಕ್ಕೆ ಶ್ರೀಸ್ವಾಮಿಯನ್ನು ಕೊಂಡುಹೋಗಿ ಪೂಜೆಯೂ ನಡೆಯುತ್ತದೆ.

೫. **ಹತ್ತನಾವಧಿ ಜಾತ್ರೆ** (ಪತ್ತನಾಜೆ): ವೃಷಭಮಾಸ ಹತ್ತರಲ್ಲಿ ಧ್ವಜಸ್ತಂಭವನ್ನು ಇಳಿಸುವುದೂ, ಶ್ರೀಸ್ವಾಮಿಗೆ ಉತ್ಸವ, ಪೂಜೆ, ಆರಾಧನೆಗಳೂ ನಡೆಯುವುವು.

ವರ್ಷದಲ್ಲಿ ಎರಡು ಸಲ ದೈವಗಳಿಗೆ ನಡಾವಳಿ ಇದೆ.

---

# ಶ್ರೀ ಕ್ಷೇತ್ರಕ್ಕೆ ಸಂಬಂಧಪಟ್ಟ ಸಂಸ್ಥೆಗಳು

**ಸಿದ್ಧವನ ಗುರುಕುಲ:** ೧೯೪೦ರಲ್ಲಿ ಉಜ್ರೆಯಲ್ಲಿ ಈ ಗುರುಕುಲವು ಪ್ರಾರಂಭವಾಯಿತು. ಸಂಸ್ಕೃತ ಹಿಂದಿ, ಕನ್ನಡ, ಇಂಗ್ಲಿಷ್ ಈ ನಾಲ್ಕು ಭಾಷೆಗಳಲ್ಲಿ ವಿದ್ಯಾಭ್ಯಾಸವು ನಡೆಯುವುದು. ಧಾರ್ಮಿಕ ಜ್ಞಾನವನ್ನೂ ಸಂಗೀತ ಸಾಹಿತ್ಯ ಮುಂತಾದ ಜ್ಞಾನವನ್ನೂ ಕೊಡುತ್ತಿದ್ದಾರೆ. ಪ್ರಾಥಮಿಕ ಶಾಲೆಗಳಲ್ಲಿ ನಾಲ್ಕನೇ ತರಗತಿ ಕಲಿತ ಎಳೆಯ ವಿದ್ಯಾರ್ಥಿಗಳಿಗೆ ಇಲ್ಲಿ ಪ್ರವೇಶ ಕೊಡುತ್ತಾರೆ. ಮೊದಲು ೨೦ ಮಂದಿ ವಿದ್ಯಾರ್ಥಿಗಳೂ ೨ ಮಂದಿ ಉಪಾಧ್ಯಾಯರೂ ಇದ್ದರು. ಈಗ ೭೦ ಮಂದಿ ವಿದ್ಯಾರ್ಥಿಗಳೂ ೭ ಮಂದಿಯ ವರೆಗೆ ಉಪಾಧ್ಯಾಯರೂ ಇರುವರು. ಸುತ್ತಲಿನ ಕಾಡನ್ನೆಲ್ಲಾ ಕಡಿದು ಹಲವು ಕಟ್ಟಡಗಳೂ ತಲೆ ಎತ್ತಿದವು. ಇದಕ್ಕೆ ಸ್ವಲ್ಪ ಭೂಮಿಯನ್ನು ಬಿಟ್ಟು, ಅದರ ಆದಾಯದಿಂದ ಅವ್ಯಾಹತವಾಗಿ ನಡಕೊಂಡು ಬರಬೇಕೆಂದು ೪ ವರ್ಷಗಳ ಹಿಂದೆ ದಿ। ಶ್ರೀ। ಹೆಗ್ಗಡೆಯವರು ಒಂದು ಟ್ರಸ್ಟ್ ಮಾಡಿದ್ದರು.

**ಕರ್ನಾಟಕ ವಿದ್ಯಾಲಯ:** ಉಜ್ರೆಯಲ್ಲಿ ೧೯೪೭ರಲ್ಲಿ ಪ್ರೌಢ ಶಿಕ್ಷಣಕ್ಕಾಗಿ 'ಕರ್ನಾಟಕ ವಿದ್ಯಾಲಯ' ಎಂಬ ಹೈಸ್ಕೂಲು ಪ್ರಾರಂಭವಾಯಿತು. ಉಜ್ರೆ ಊರಿನ ಆಸುಪಾಸಿನ ಆಢ್ಯ ಮಹನೀಯರು ಸೇರಿ, ದಿ। ಶ್ರೀ।

ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ಈ ಸಂಸ್ಥೆಯು ಪ್ರಾರಂಭವಾಯಿತು. ಖಾಸಗಿ ಸ್ಥಳವನ್ನೂ, ಹಣವನ್ನೂ ಕೊಟ್ಟದ್ದಲ್ಲದೆ ವಿದ್ಯಾರ್ಥಿ ನಿಲಯವನ್ನೂ ದಿ। ಶ್ರೀ। ಹೆಗ್ಗಡೆಯವರು ಕಟ್ಟಿಸಿ ಕೊಟ್ಟರು.

## ಶ್ರೀ ಧರ್ಮಸ್ಥಳ ಕ್ಷೇತ್ರದ "ಮಹಾನಡಾವಳಿ"

ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ಕಳೆದ ವಿಕೃತಿ ಸಂವತ್ಸರದ ಮಾಘ ಶುದ್ಧ ನವಮಿ ಗುರುವಾರ ಮೊದಲ್ಗೊಂಡು ಮಾಘ ಬಹುಳ ಪಾಡ್ಯ ಗುರುವಾರದ ತನಕ ಅಂದರೆ ತಾ. ೧೫-೨-೫೧ರಿಂದ ತಾ. ೨೨-೨-೫೧ರ ವರೆಗೆ "ಮಹಾನಡಾವಳಿ" ಮಹೋತ್ಸವವನ್ನು ಜರಗಿಸುವುದಾಗಿ ಸಂಕಲ್ಪಿಸಿ, ಶ್ರೀ ಮಂಜುನಾಥ ಮಹಾಸ್ವಾಮಿಯ ಮಹದನುಗ್ರಹದಿಂದ ಈ ಮಂಗಳೋತ್ಸವವು ಅವರ ಸನ್ನಿಧಿ ಮತ್ತು ಸಮ್ಮುಖದಲ್ಲಿ ಸಾಂಗವಾಗಿ ನೆರವೇರಿತು.

"ನಡಾವಳಿ" ಎಂದರೇನು? ಅದು ಬಹು ಕಾಲದಿಂದ ರೂಢಿಯಾಗಿ ಸಂಪ್ರದಾಯವಾಗಿ ನಡೆದು ಬಂದ ಧರ್ಮ ಪ್ರಚಾರ ಕಾರ್ಯ. ಈ ಕಾಲದಲ್ಲಿ ನಾನಾ ರೀತಿಯಲ್ಲಿ ಭಜಿಸಿ ಪೂಜಿಸಿಕೊಂಡು ಬರುವಂಥ ದೇವರನ್ನೂ ವಿವಿಧ ರೀತಿಯ ದೇವತೆಗಳನ್ನೂ ಆರಾಧನೆ, ಅರ್ಚನೆ, ಪೂಜಾ ವಿಧಾನಗಳಿಂದ ಪ್ರಸನ್ನೀಕರಿಸಿಕೊಳ್ಳುವ ಒಂದು ರೀತಿಯ ಮಹಾಯಜ್ಞವೇ ಅದೆನ್ನಬಹುದು. ರಾಷ್ಟ್ರದ ಅಭ್ಯುದಯಕ್ಕೂ, ಲೋಕದ ಸುಖಶಾಂತಿ ಕ್ಷೇಮಲಾಭಕ್ಕೂ ಹಿಂಬಲ ಮುಂಬಲ ಬೆಂಬಲಗಳು ದೊರಕುವ ಹಾಗೆ, ಅನಂತಮಹಿಮನಾದ ಪರಮಾತ್ಮನನ್ನು ವಿಶೇಷವಾದ ಪೂಜಾದಿಗಳಿಂದ ಅನನ್ಯ ಭಕ್ತಿಭಾವದ ಪ್ರಾರ್ಥನೆಗಳಿಂದ ಒಲಿಸಿಕೊಳ್ಳುವುದೇ ಇದರ ಮುಖ್ಯ ಮೂಲ ಉದ್ದೇಶವಾಗಿದೆ.

---

## ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿಯ ಸೇವೆಯ ತಪಶೀಲು

**ಶ್ರೀ ಮಂಜುನಾಥ ಸ್ವಾಮಿಗೆ:** ಪಂಚಾಮೃತಾಭಿಷೇಕ ಏಕಾದಶ ರುದ್ರಾಭಿಷೇಕ ಸಹಿತ ಸುವರ್ಣಪುಷ್ಪ ಬ್ರಹ್ಮಾರ್ಪಣಕ್ಕೆ ಕೂಡಾ ರೂ. ೧೬—೦—೦. ಬಿಲ್ವಪತ್ರಾರ್ಚನಕ್ಕೆ ೨—೮—೦. ಕರ್ಪೂರಾರತಿ ೧—೪—೦. ಹರಿವಾಣ ನೈವೇದ್ಯ ೬—೮—೦. ಕ್ಷೀರಾಭಿಷೇಕ ೨—೮—೦.

**ಶ್ರೀ ಅಮ್ಮನವರಲ್ಲಿ:** ಪರಮಾನ್ನ ನೈವೇದ್ಯ ೬—೮—೦. ಕರ್ಪೂರಾರತಿ ೧—೪—೦. ಕುಂಕುಮಾರ್ಚನೆ ೧—೮—೦.

**ಶ್ರೀ ಗಣಪತಿ ದೇವರಿಗೆ:** ದೂರ್ವಾರ್ಚನೆ ೨—೮—೦. ಪಂಚಕಜ್ಜಾಯ ೨—೦—೦. ಮಂಗಳಾರತಿ ೧—೪—೦.

**ಶ್ರೀ ಅಣ್ಣಪ್ಪ ಸ್ವಾಮಿಗೆ:** ಬೆಲ್ಲ ಕಾಯಿ ನೈವೇದ್ಯ ೩—೦—೦, ಕರ್ಪೂರಾರತಿ ೧—೪—೦.

**ಶ್ರೀ ಮಂಜುನಾಥ ದೇವರಿಗೆ ವಿಶೇಷ ಉತ್ಸವ ಸೇವೆಗಳು:** ಪಂಚಾಮೃತಾಭಿಷೇಕ ಶತರುದ್ರಾಭಿಷೇಕಕ್ಕೆ ೧೦೮—೦—೦; ದೇವಸ್ಥಾನದೊಳಗೆ ಬೆಳ್ಳಿ ಪಾಲಕಿ ಉತ್ಸವ ೨೦೮—೦—೦. ಬೆಳ್ಳಿ ಪಾಲಕಿ ದೀಪೋತ್ಸವ ಸಹಿತ ೪೦೮—೦—೦. ಬೆಳ್ಳಿ ನಂದಿಲಾಲಕಿ ಉತ್ಸವ ದೀಪೋತ್ಸವ ಸಹಿತ ೪೫೦—೦—೦.

ಬೆಳ್ಳಿ ಪಾಲಕಿ ಮತ್ತು ಬೆಳ್ಳಿ ಲಾಲಕಿ ಉತ್ಸವ, ದೀಪೋತ್ಸವ, ಉದ್ಯಾನವನ ದೀಪೋತ್ಸವ ಪೂಜೆ ಇತ್ಯಾದಿ ೭೫೦—೦—೦. ನಿತ್ಯ ಸೇವೆಗಳೊಂದಿಗೆ ೧೦೮ ಜನ ಬ್ರಾಹ್ಮಣ ಸಂತರ್ಪಣೆ, ದಕ್ಷಿಣೆ, ರಂಗಪೂಜೆ, ದೀಪೋತ್ಸವ, ಬೆಳ್ಳಿ ಪಾಲಕಿಯಲ್ಲಿ ಉತ್ಸವ, ಉದ್ಯಾನವನದಲ್ಲಿ ಪೂಜೆ ಕೂಡಾ ೧೦೨೫—೦—೦. ಬೆಳ್ಳಿ ಮಂಟಪ ರಥದಲ್ಲಿ ಶ್ರೀ ಸ್ವಾಮಿಯ ವಿಹಾರೋತ್ಸವ, ವಸವಂತ ಪೂಜೆ, ೧೦೮ ಜನ ಬ್ರಾಹ್ಮಣ ಸಂತರ್ಪಣೆ, ದೀಪೋತ್ಸವ ಕೂಡ ೨೦೦೦—೦—೦.

**ಶ್ರೀ ಅಮ್ಮನವರಲ್ಲಿ:** ಪವಮಾನಾಭಿಷೇಕ ೧೦೮—೦—೦.

**ಶ್ರೀ ಗಣಪತಿ ದೇವರಲ್ಲಿ:** ಮೂಡಪ್ಪ ಪೂಜೆ ೨೨೦—೦—೦.

**ಬಸ್ತಿ ಶ್ರೀ ಚಂದ್ರನಾಥ ಸ್ವಾಮಿಗೆ:** ಪಂಚಾಮೃತಾಭಿಷೇಕಕ್ಕೆ ೬—೦—೦. ಕ್ಷೀರಾಭಿಷೇಕಕ್ಕೆ ೩—೦—೦. ೨೪ ಕಲಶಾಭಿಷೇಕ, ಪೂಜೆ, ದೀಪಾರಾಧನೆಗೆ ಕೂಡಾ ೧೦೦—೮—೦. ಅಮ್ಮನವರಲ್ಲಿ ಪೂಜೆ ೬—೦—೦.

**ದೇವಸ್ಥಾನದಲ್ಲಿ ತುಲಾಭಾರ ಹರಿಕೆಗೆ:** ಅಕ್ಕಿಯಲ್ಲಿ ರೂ. ೧೦೦—೦—೦. ಅಕ್ಕಿ, ತೆಂಗಿನ ಕಾಯಿ ೧೫೦—೦—೦. ಬೆಲ್ಲದಲ್ಲಿ ೨೦೦—೦—೦. ಸಕ್ರೆಯಲ್ಲಿ ೨೫೦—೦—೦. ತುಪ್ಪದಲ್ಲಿ ೨೫೦—೦—೦ ತೆಂಗಿನಕಾಯಿಯಲ್ಲಿ ೧೫೦—೦—೦. ಶ್ರೀಗಂಧದಲ್ಲಿ ೩೦೦—೦—೦. ಹಣ ರೊಕ್ಕದಲ್ಲಿ ೫೦೦—೦—೦. ತಾಮ್ರದಲ್ಲಿ ೫೦೦—೦—೦. ಬೆಳ್ಳಿಯಲ್ಲಿ ೧೦೦೦—೦—೦. ಬೆಳ್ಳಿ ಮತ್ತು ಚಿನ್ನದಲ್ಲಿ ೨೦೦೦—೦—೦.

ಆಣೆ ಮಾತು, ಕುಡಿ ಮಾತು, ಪ್ರಮಾಣ ವಾಕ್ಯ ತೀರ್ಮಾನಕ್ಕೆ ೫—೦—೦, ೧೦—೦—೦, ೨೦—೦—೦, ೪೦—೦—೦, ೫೦—೦—೦, ೧೦೦—೦—೦ ಪ್ರಕಾರ ಕಾಣಿಕೆ ಕೊಡಬೇಕಾಗುವುದು.

ಕೋರ್ಟು, ಪಂಚ್ಯಾತಿ ಆಫೀಸ್ ಮೊದಲಾದ ಸಂಸ್ಥೆಗಳ ಮೂಲಕ ಮಾಡಿಸತಕ್ಕ ಪ್ರಮಾಣ ಕಾಣಿಕೆ ರೂಪ್ಯಾ ೨೪—೦—೦.

---



# ಕಳೆದ ಇಪ್ಪತ್ತನಾಲ್ಕು ವರ್ಷಗಳ
# ವಿವಿಧ ಧರ್ಮ ಸಮ್ಮೇಲನಗಳ ಅಧ್ಯಕ್ಷರು ಮತ್ತು ವಿಷಯಗಳು

1 1933 ಶ್ರೀಮಾನ್ ಕೆ. ಬಸವರಾಜ ಅರಸ್, ಎಮ್. ಎ., ಎಲ್. ಎಲ್. ಬಿ., ಮೈಸೂರು.
—ದೇವರ ಸ್ವರೂಪ ಮತ್ತು ದೈವಭಕ್ತಿ.
ಶ್ರೀ ಎಚ್. ಎನ್. ರಾಘವೇಂದ್ರಾಚಾರ್ಯರು, ಎಂ. ಎ., ಮೈಸೂರು.
—ಪಾಪ ಪುಣ್ಯ ಸ್ವರೂಪ ಮತ್ತು ಮುಕ್ತಿ.

2 1934 ಪ್ರಾಕ್ತನವಿಮರ್ಶಾ ವಿಚಕ್ಷಣ ಶ್ರೀ ಆರ್. ನರಸಿಂಹಾಚಾರ್ಯ, ಎಂ. ಎ., ಬೆಂಗಳೂರು.
—ಜಡ ಚೈತನ್ಯ ಸ್ವರೂಪ ಮತ್ತು ಅವುಗಳ ಪರಸ್ಪರ ಸಂಬಂಧ.
ಪ್ರಾಕ್ತನವಿಮರ್ಶಾ ವಿಚಕ್ಷಣ ಶ್ರೀ. ಆರ್. ನರಸಿಂಹಾಚಾರ್ಯ, ಎಂ. ಎ. ಬೆಂಗಳೂರು.
—ಆಧುನಿಕ ವಿಜ್ಞಾನ ಸಂಶೋಧನೆಗಳು ನಿಮ್ಮ ಮತ ತತ್ತ್ವಗಳಿಗೆ ಸಾಧಕ ಬಾಧಕಗಳೋ?

3 1935 ಶ್ರೀ ಬಿ. ಎಂ. ಶ್ರೀಕಂಠಯ್ಯನವರು, ಎಂ. ಎ., ಬಿ. ಎಲ್., ಬೆಂಗಳೂರು.
—ಆತ್ಮನ ಪುನರ್ಜನ್ಮ.
ಶ್ರೀ. ಬಿ. ಎಂ. ಶ್ರೀಕಂಠಯ್ಯನವರು, ಎಂ. ಎ., ಬಿ. ಎಲ್., ಬೆಂಗಳೂರು.
—ಮತತತ್ತ್ವಗಳ ಪರಸ್ಪರ ಸಾಮರಸ್ಯ.

4 1936 ಶ್ರೀ ಎಂ. ನರಸಿಂಗರಾವ್, ಬಿ. ಎ., ಎಂ. ಎಲ್., ನಿವೃತ್ತ ಜಿಲ್ಲಾ ಜಡ್ಜರು, ಮಂಗಳೂರು.
—ತಮ್ಮ ಮತದ ಸನಾತನತ್ವ.
ಶ್ರೀ. ಎಂ. ನರಸಿಂಗರಾವ್, ಬಿ. ಎ., ಎಂ. ಎಲ್., ನಿವೃತ್ತ ಜಿಲ್ಲಾ ಜಡ್ಜರು, ಮಂಗಳೂರು.
—ತಮ್ಮ ಮತದ ವಿಶ್ವಪ್ರೇಮ ಸಮರ್ಥನ.

5 1937 ಶ್ರೀ ಹುಕ್ಕೇರಿಕರ್, ಧಾರವಾಡ.
—ಕರ್ಣಾಟಕದ ಏಕೀಕರಣ.
ಶ್ರೀ ಎಚ್. ಎನ್. ರಾಘವೇಂದ್ರಾಚಾರ್ಯರು, ಎಮ್. ಎ., ಮೈಸೂರು.
—ಆತ್ಮನ ಸ್ವರೂಪ ಮತ್ತು ಆತ್ಮನ ಅವಸ್ಥಾ ವಿಶೇಷಗಳು.

6 1938 ಶ್ರೀ। ಕೆ. ಆರ್. ಶ್ರೀನಿವಾಸಯ್ಯಂಗಾರ್ಯರು, ಎಮ್. ಎ. ಮೈಸೂರು.
—ರೈತರ ಜೀವನ ಸುಧಾರಣೆ.
ಶ್ರೀ. ಕೆ. ಆರ್. ಶ್ರೀನಿವಾಸಯ್ಯಂಗಾರ್ಯರು, ಎಮ್. ಎ., ಮೈಸೂರು.
—ಮತಾಚಾರ ವಿಧಾನೋದ್ದೇಶ.

7 1939 ಶ್ರೀ ಕೆ. ಬಿ. ಜಿನರಾಜ ಹೆಗ್ಡೆಯವರು, ಬಿ. ಎಸ್‌ಸಿ., ಎಲ್. ಎಲ್. ಬಿ , ಮಂಗಳೂರು.
—ದೇವಸ್ಥಾನ ಮಠಗಳ ಕರ್ತವ್ಯ.
ಶ್ರೀ ಕೆ. ಬಿ. ಜಿನರಾಜ ಹೆಗ್ಡೆಯವರು, ಬಿ. ಎಸ್‌ಸಿ., ಎಲ್ ಎಲ್. ಬಿ., ಮಂಗಳೂರು.
—ದೇವರ್ಕಳ ಅಸ್ತಿತ್ವ ಮತ್ತು ಮಹತ್ವ.

| | | |
|---|---|---|
| 8 | 1940 | ಶ್ರೀ ಎಮ್. ಎಸ್. ಬಸವಲಿಂಗಯ್ಯನವರು, ಎಮ್. ಎ., ಬಿ. ಎಲ್., ಮೈಸೂರು.<br>—ದೈವ ಮತ್ತು ಪೌರುಷ.<br>ಶ್ರೀ ಎಮ್. ಎಸ್. ಬಸವಲಿಂಗಯ್ಯನವರು, ಎಮ್. ಎ., ಬಿ. ಎಲ್., ಮೈಸೂರು.<br>—ದೇವರು ಮತ್ತು ಅವತಾರಗಳು. |
| 9 | 1941 | ಶ್ರೀ ಕೆ. ಗುರುದತ್ತರವರು, ಬಿ. ಎ., ಮೈಸೂರು.<br>—ಜೀವಾತ್ಮ, ಪರಮಾತ್ಮ, ಜಗತ್ತು ಇವುಗಳ ಸ್ವರೂಪ ಮತ್ತು ಸಂಬಂಧ.<br>ಶ್ರೀ ಕೆ. ಗುರುದತ್ತರವರು, ಬಿ. ಎ., ಮೈಸೂರು.<br>—ವಿಶ್ವಧರ್ಮಗಳಲ್ಲಿ ಅಹಿಂಸೆಯ ಸ್ಥಾನ. |
| 10 | 1942 | ಶ್ರೀ ಶ್ರೀ ಶಂಕರಾನಂದ ಭಾರತೀ ಸ್ವಾಮಿಗಳವರು, ಮೈಸೂರು.<br>—ಕರ್ಣಾಟಕ ಸಾಹಿತ್ಯದ ವೈಶಿಷ್ಟ್ಯ.<br>ಶ್ರೀ ಶ್ರೀ ಶಂಕರಾನಂದ ಭಾರತೀ ಸ್ವಾಮಿಗಳವರು, ಮೈಸೂರು.<br>—ಜೀವ, ಈಶ್ವರ, ಜಗತ್ತು ಮತ್ತು ಇವುಗಳ ಸಂಬಂಧ. |
| 11 | 1943 | ಶ್ರೀ ಎಚ್. ರಾಮರಾಯರು, ಎಮ್. ಎ., ಎಲ್. ಟಿ., ಬಿ. ಒ. ಎಲ್., ಮಂಗಳೂರು.<br>—ಬದ್ಧಾತ್ಮ ಮತ್ತು ಮುಕ್ತಾತ್ಮ.<br>ಶ್ರೀ ಎಚ್. ರಾಮರಾಯರು, ಎಮ್. ಎ , ಎಲ್. ಟಿ., ಬಿ. ಒ. ಎಲ್., ಮಂಗಳೂರು.<br>—ಗೃಹಸ್ಥ ಧರ್ಮ. |
| 12 | 1944 | ಪಂಡಿತರತ್ನ ಶ್ರೀ. ಎ. ಶಾಂತಿರಾಜ ಶಾಸ್ತ್ರಿಗಳು, ಮೈಸೂರು.<br>—ನೂತನ ಹಾಗೂ ಪುರಾತನ ವಿದ್ಯಾಭ್ಯಾಸದ ಗುಣದೋಷ ವಿಚಾರ.<br>ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು, ಬೆಂಗಳೂರು.<br>—ಕನ್ನಡವು ಧರ್ಮದ ಬೆಳವಣಿಗೆಗೆ ಮಾಡಿದ ಒತ್ತಾಸೆ. |
| 13 | 1945 | ಶ್ರೀ ಎಮ್. ಯಮುನಾಚಾರ್ಯ, ಎಮ್. ಎ., ಮೈಸೂರು.<br>—ಸಂಸಾರ ಸ್ವರೂಪ ನಿರೂಪಣ.<br>ಶ್ರೀ ಎಮ್. ಯಮುನಾಚಾರ್ಯ, ಎಮ್. ಎ. ಮೈಸೂರು.<br>—ದೇವರ ಔಪಾಸನೆಯ ಗುರಿ |
| 14 | 1946 | ಶ್ರೀ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್, ಎಂ. ಎ., ಎಂ. ಆರ್. ಎ. ಎಸ್. ಮೈಸೂರು.<br>—ಯುದ್ಧಾಸಕ್ತರಲ್ಲಿ ಶಾಂತಿಸ್ಥಾಪನೆಗೆ ಅನುಕೂಲವಾದ ನಿಮ್ಮ ನಿಮ್ಮ ಮತತತ್ತ್ವಗಳು ಯಾವುವು?<br>ಶ್ರೀ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್, ಎಂ. ಎ., ಎಂ. ಆರ್. ಎ. ಎಸ್., ಮೈಸೂರು.<br>—ಕನ್ನಡ ಸಾಹಿತ್ಯ [ವಿವಿಧ ವಿಷಯಗಳ ಮೇಲೆ] |
| 15 | 1947 | ಶ್ರೀ ಎಮ್. ಸಿ. ಮಲ್ಲಪ್ಪನವರು, ಮೈಸೂರು.<br>—ಸ್ವತಂತ್ರ ಭಾರತದಲ್ಲಿ ಧರ್ಮದ ಸ್ಥಾನ.<br>ಶ್ರೀ ಎಮ್. ಸಿ. ಮಲ್ಲಪ್ಪನವರು, ಮೈಸೂರು.<br>—ಕನ್ನಡ ಸಾಹಿತ್ಯ (ವಿವಿಧ ವಿಷಯಗಳ ಮೇಲೆ) |

16 1948 ಶ್ರೀ ಆಲೂರ ವೆಂಕಟರಾಯರು— ಜನಜೀವನವೂ ದೈವಭಕ್ತಿಯೂ.
ಶ್ರೀ ಆಲೂರ ವೆಂಕಟರಾಯರು— ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ ಮತ್ತು ಸಾಹಿತ್ಯ

17 1949 ಶ್ರೀ ಎಚ್. ಎನ್. ರಾಘವೇಂದ್ರಾಚಾರ್ಯರು, ಎಮ್. ಎ. ಮೈಸೂರು.
— ಜನಜೀವನ ಮತ್ತು ತ್ಯಾಗಬುದ್ಧಿ
ಶ್ರೀ ವಿ. ಸೀತಾರಾಮಯ್ಯ, ಬೆಂಗಳೂರು— ಕನ್ನಡ ಸಾಹಿತ್ಯ (ವಿವಿಧ ವಿಷಯಗಳ ಮೇಲೆ)

18 1950 ಶ್ರೀ ಶ್ರೀ ಶಿವಕುಮಾರಸ್ವಾಮಿಗಳು, ಸಿದ್ಧಗಂಗಾಮಠ, ತುಮಕೂರು.
— ಭಾರತೀಯ ಸಂಸ್ಕೃತಿಯ ಬೆಳವಣಿಗೆಗೆ ಮತ ಧರ್ಮಗಳಿಂದಾದ ನೆರವು.
ಶ್ರೀ ಶ್ರೀ ಶಿವಕುಮಾರಸ್ವಾಮಿಗಳು, ಸಿದ್ಧಗಂಗಾಮಠ, ತುಮಕೂರು.
— ಹಿಂದಿನ, ಇಂದಿನ, ಮುಂದಿನ ಸಾಹಿತ್ಯ.

19 1951 ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಬೆಂಗಳೂರು.
— ಕನ್ನಡಿಗರಿಂದ ಕನ್ನಡಕ್ಕೆ ಸಲಬೇಕಾದ ಸೇವೆ
ಶ್ರೀ ಸಿ. ಕೆ. ವೆಂಕಟರಾಮಯ್ಯನವರು, ಬೆಂಗಳೂರು.
— ಜನಾಂಗದ ಬೆಳವಣಿಗೆಗೆ ದೇಹ ಮತ್ತು ಬುದ್ಧಿಬಲ ಹೇಗೆ ಅವಶ್ಯಕ?

20 1952 ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು, ಎಂ. ಎ., ಬೆಂಗಳೂರು.
— ಆಧುನಿಕ ವಿದ್ಯಾಭ್ಯಾಸವೂ ಜನಜೀವನವೂ
ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು, ಎಂ. ಎ., ಬೆಂಗಳೂರು.
— ಕನ್ನಡ ಸಾಹಿತ್ಯದಲ್ಲಿ ಪೌರುಷ ತ್ಯಾಗ ಮತ್ತು ಭಕ್ತಿ ಇವುಗಳ ಪ್ರಬೋಧನೆ

21 1953 ಶ್ರೀ ಸಿ. ವಿ. ಚೆನ್ನಬಸವ ಸ್ವಾಮಿಗಳು, ಬಳ್ಳಾರಿ— ಜೀವಿಯ ಹುಟ್ಟು ಸಾವು.
ಶ್ರೀ ಅ. ನ. ಕೃಷ್ಣರಾಯರು, ಬೆಂಗಳೂರು— ಕನ್ನಡ ಸಂಸ್ಕೃತಿ (ವಿವಿಧ ವಿಷಯಗಳ ಮೇಲೆ.)

22 1954 ಉದ್ಘಾಟಕರು— ಅಮಿನ್— ಉಲ್— ಮುಲ್ಕ್ ಸರ್ ಮಿರ್ಜಾ ಇಸ್ಮಾಯಿಲ್ ಅವರು
ಶ್ರೀ ಶ್ರೀ ಶಿವರಾತ್ರಿ ಮಹಾಸ್ವಾಮಿಗಳು, ಸುತ್ತೂರು.
— ಚಿದಚಿತ್ ವಸ್ತುಗಳ ಅಸ್ತಿತ್ವ ಮತ್ತು ಪುಣ್ಯ ಪಾಪಗಳ ಸ್ವರೂಪ.
ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು.
— "ಸಾಹಿತಿಯ ಧರ್ಮ", "ಸ್ವಾತಂತ್ರ್ಯ ನಂತರದ ಕನ್ನಡ ಸಾಹಿತ್ಯ", "ಗದ್ಯ ಸಾಹಿತ್ಯದ ಬೆಳವಣಿಗೆ" ಮತ್ತು "ತುಳುನಾಡಿನ ಕವಿಗಳು".

23 1955 ಶ್ರೀ ಯಂ. ಯಾಮುನಾಚಾರ್ಯರು, ಮೈಸೂರು.
— ಮತಧರ್ಮಗಳಿಗೂ ಆಧುನಿಕ ಜೀವನಕ್ಕೂ ಸಾಮರಸ್ಯ.
ಶ್ರೀ ವಿ. ಸೀತಾರಾಮಯ್ಯ, ಬೆಂಗಳೂರು— ಕನ್ನಡ ಸಾಹಿತ್ಯದ ವಿವಿಧ ವಿಷಯಗಳ ಕುರಿತು.

24 1956 ಶ್ರೀ ಜಿ. ಪಿ. ರಾಜರತ್ನಂ, ಬೆಂಗಳೂರು— ಧರ್ಮ ನುಡಿದಂತೆ ನಡೆದ ಮಹಾನುಭಾವರು.
ಶ್ರೀ ಜಿ. ಪಿ. ರಾಜರತ್ನಂ— ಕವಿಗೋಷ್ಠಿ— ಇಂದಿನ ಕವಿತೆಗಳ ವಿಚಾರ.

# ಸರ್ವಧರ್ಮ ಸಮ್ಮೇಳನದ ಬೆಳ್ಳಿ ಹಬ್ಬ—ಧರ್ಮಸ್ಥಳ

## ಸರ್ವಧರ್ಮ ಸಮನ್ವಯ, ಲೋಕಶಾಂತಿಯ ಮಹತ್ಸಾಧನೆ.

---

ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ "ಸರ್ವಧರ್ಮ ಸಮ್ಮೇಳನ" ಎಂಬ ಮಹಾ ಜ್ಞಾನಯಜ್ಞ ಸಾಂಗವಾಗಿ ಸಫಲವಾಗಿ ಕಳೆದ ಸುಮಾರು ಕಾಲು ಶತಮಾನದಿಂದ ನಡೆದು ಬಂದಿದೆ. ಈವೊತ್ತು ಅದರ ಬೆಳ್ಳಿ ಹಬ್ಬ—ಬಹು ಸಂಭ್ರಮ ವೈಭವಗಳೊಡನೆ ಕೌತುಕಪ್ರದವಾಗಿ ಜರುಗುವ ಬಹು ದೊಡ್ಡ ಸಮಾರಂಭ.

ನಮ್ಮಲ್ಲಿ ಹಲವು ಮತಗಳಿವೆ; ಅದರದರದೇ ಆದ ಮತತತ್ವಗಳಿವೆ. ಆ ತತ್ವಗಳ ವಿಭಿನ್ನಾಭಿಪ್ರಾಯಗಳು ಪ್ರಸಕ್ತವಾದರೇನೇ ಸಮನ್ವಯವೆಂಬುದೇರ್ಪಡುವುದು. ಈ ಸಮನ್ವಯ ಸಿದ್ಧಿಯೇ ಈ ಸಮ್ಮೇಳನದ ಗುರಿ; ಅದೇ ಈ ಸಮ್ಮೇಳನಾಧಿವೇಶನಗಳಿಂದ ನಮಗೆ ದೊರಕಬೇಕಾದ ಮಹಾ ಫಲ.

ಈ ಮಹಾಫಲವನ್ನು ಸಂಪಾದಿಸಬೇಕಾದರೆ ಅದಕ್ಕೆ ತ್ಯಾಗ ಅತ್ಯಾವಶ್ಯಕ. ಆ ತ್ಯಾಗ ಧರ್ಮ ಯಾವ ಉದ್ದೇಶಕ್ಕಾಗಿ? ಜನಜೀವನಕ್ಕೆ ಮಂಗಳವನ್ನು ಉಂಟುಮಾಡಲಿಕ್ಕಾಗಿ; ನಮ್ಮ ಜನರ ಕಲ್ಯಾಣ ಸಾಧನೆಗಾಗಿ. ನಮ್ಮ ಮಧ್ಯದಲ್ಲಿರುವ ಎಷ್ಟೋ ಮಂದಿ ತ್ಯಾಗಶೀಲರು ಯಾವುದೋ ದೊಡ್ಡ ಬಯಕೆಯನ್ನು ಸಾಧಿಸಲು ತೊಡಗಿದ್ದಾರೆ. ತಮ್ಮ ಜೀವಿತದಲ್ಲಿ ಎಲ್ಲ ಶಕ್ತಿಯಿಂದ ಬಹುಮುಖವಾಗಿ ಯತ್ನಿಸಿ ಎಲ್ಲ ರೀತಿಯ ಸುಖದ ಬಾಳನ್ನು ಜೀವನದಲ್ಲಿಯ ಉನ್ನತಿಯನ್ನು ನಮ್ಮ ನಾಡಿಗೆ ಉಂಟುಮಾಡುವುದಕ್ಕಾಗಿ ಅವರು ಕಂಕಣ ಕಟ್ಟಿದ್ದಾರೆ. ಈ ಸಮ್ಮೇಳನದ ಕರ್ತೃಗಳಾದ ಶ್ರೀ ಧರ್ಮಸ್ಥಳದ ಧರ್ಮದರ್ಶಿಗಳಿಗೆ ಅಂಥ ತ್ಯಾಗಶೀಲರ ಸಾಲಿನಲ್ಲಿ ಅತ್ಯುಚ್ಚವೂ ಸರ್ವಮಾನ್ಯವೂ ಆದ ಸ್ಥಾನವೇ ಸಲ್ಲಬೇಕು; ಸಲ್ಲುತ್ತಿದೆ. ಅಂಥ ತ್ಯಾಗದೀಕ್ಷೆಯ ಮಹತ್ಸಾಧನೆಯಿಂದ ಮಾತ್ರವೇ ನಾಡಿನ ಸಾಮಾಜಿಕ ಸಾಂಪತ್ತಿಕ ಧಾರ್ಮಿಕ ಏಳಿಗೆ ಸಾಧ್ಯ.

ಹೀಗೆ ದೇಶೋನ್ನತಿಯ ಮುಖ್ಯಾಂಗಗಳಲ್ಲಿ ಒಂದಾದ ಧರ್ಮಪ್ರಸಾರದ ಆವಶ್ಯಕತೆಯನ್ನು ಮನಗಂಡು ತಮ್ಮ ಜೀವನಾದರ್ಶವನ್ನಾಗಿ ಅದನ್ನೇ ಇರಿಸಿಕೊಂಡು, ಶ್ರೀ ಧರ್ಮಸ್ಥಳ ಕ್ಷೇತ್ರದಲ್ಲಿ ಕಾರ್ತಿಕ ದೀಪೋತ್ಸವದ ಸಮಯದಲ್ಲಿ ಈ ಸರ್ವಧರ್ಮಸಮ್ಮೇಳನವನ್ನಾರಂಭಿಸಿದವರು ಆ ಕ್ಷೇತ್ರದ ಧರ್ಮಾಧಿಕಾರಿಗಳಾಗಿದ್ದ ಕೀರ್ತಿಶೇಷ ಮಂಜಯ್ಯ ಹೆಗ್ಗಡೆ ಅವರು. 'ದೇವರಿಲ್ಲ' ಎಂಬ ಈ ಕೂಗು ಬಲವಾಗುತ್ತಿರುವುದನ್ನೂ, ವಿಜ್ಞಾನದ ಹೊಸ ಶೋಧನೆಗಳಿಂದ ಆಧುನಿಕ ಪದ್ಧತಿಗಳನ್ನು ಮೆಚ್ಚುವ ನಾಗರಿಕರಲ್ಲಿ ಪ್ರಾಚೀನ ಧರ್ಮಗಳ ನೆಲಗಟ್ಟು ಜಾರಿ ಕುಸಿದು ಬೀಳತೊಡಗಿದುದನ್ನೂ ಕಂಡು, ಈ ಸಮ್ಮೇಳನ ಕಾರ್ಯಕ್ಕೆ ಅವರು ಕೈ ಹಚ್ಚಿದರು. ನಮ್ಮಲ್ಲಿನ ಮತವೈಷಮ್ಯವು ದೂರವಾಗಬೇಕು; ಸಂಪೂರ್ಣ ಧಾರ್ಮಿಕ ಪರಿಜ್ಞಾನ ನಮ್ಮ ಜನರಲ್ಲಿ ಉಂಟಾಗಬೇಕು; ಪರಮತ ಸಹನತೆಯ ಸ್ಫೂರ್ತಿ ಬೆಳೆಯಬೇಕು; ಆತ್ಮೋನ್ನತಿಯ ಸ್ಥಿತಿಯನ್ನು ಮೇಲ್ಪಡಿಸಿಕೊಳ್ಳಬೇಕೆಂಬ ಪ್ರವೃತ್ತಿ ಪ್ರತಿಯೊಬ್ಬರಲ್ಲಿಯೂ ಬಲಿಯಬೇಕು; ಸಮಾಜಗಳಲ್ಲಿರುವ ಧಾರ್ಮಿಕ ಸಂಕುಚಿತ ಭಾವ ವಿಶಾಲ ಭಾವನೆಗೆ ಅವಕಾಶ ಮಾಡಿ ಕೊಡಬೇಕು; ಇಷ್ಟಾದರೆ ಸರ್ವಧರ್ಮಗಳಲ್ಲಿ ಆದರಬುದ್ಧಿ ಗೌರವ

ಭಾವ ಉಂಟಾಗಿ ನಾಡಿನ ಧಾರ್ಮಿಕ ಮೂಲದ ದೊಂಬಿ ದಂಗೆಗಳು ನಿಂತು 'ಮಾನವನ ಚಿತ್ತಶಾಂತಿಗೆ ತನ್ಮೂಲಕ ದೇಶದ ನೆಮ್ಮದಿಗೆ ಐಕ್ಯಕ್ಕೆ ಮಾರ್ಗವಾಗುವುದು ಎಂಬ ಸದುದ್ದೇಶಪ್ರೇರಿತರಾಗಿ ಅವರು ತಮ್ಮ ಶ್ವಾಸಾಂತದ ವರೆಗೂ, ಧೃತಿಗೆಡದೆ, ತಾಳ್ಮೆಗೆಡದೆ, ವರ್ಷದಿಂದ ವರ್ಷಕ್ಕೆ ಸಮ್ಮೇಳನಾಧಿವೇಶನದ ಕಳೆ ಏರುವಂತೆ, ಅವುಗಳಿಂದ ಜನರಲ್ಲಿ ದೈವಭಕ್ತಿ ಧಾರ್ಮಿಕ ಜ್ಞಾನ ವೃದ್ಧಿಗೊಳ್ಳುವ ಹಾಗೆ ನಡೆಸಿಕೊಂಡು ಬಂದರು. ಭಿನ್ನಧರ್ಮಗಳ ಏಕೀಭಾವವನ್ನು ಯಾವ ಧರ್ಮಕ್ಕೂ ಲೋಪವಿಲ್ಲದಂತೆ ಶತಮಾನಗಳಿಂದ ನಿರಂತರವೂ ಅನುಷ್ಠಾನಕ್ಕೆ ತಂದುಕೊಳ್ಳುತ್ತಿರುವ ಸರ್ವಸಮ ದೃಷ್ಟಿಯು ಈ ಪವಿತ್ರ ಕ್ಷೇತ್ರದಲ್ಲಿಯೇ ಅಲ್ಲದೆ ಈ ಸರ್ವಸಮನ್ವಯ ಕಾರ್ಯದ ಸಮ್ಮೇಳನವನ್ನು ಕನ್ನಡ ನಾಡಿನಲ್ಲಿ ಸರ್ವಪ್ರಥಮವಾಗಿ ಧರ್ಮತೇಜಸ್ಸಿನ ಜ್ಯೋತಿಯೊಡನೆ ಬೆಳಗಿಸಲು ಮತ್ತೆಲ್ಲಿ ತಾನೇ ಸಾಧ್ಯ? ಎಂಬುದನ್ನು ತಾರ್ಕಣೆಗೆ ತಂದು ಕೊಟ್ಟರು. ಈ ಸಮ್ಮೇಳನಗಳಿಂದ ಕ್ಷೇತ್ರದ ಮಹಿಮೆ ಕೀರ್ತಿ ಎಷ್ಟು ಬೆಳೆಯಬಹುದೋ ಅದಕ್ಕೆ ನಾಲ್ಕೆಂಟು ಪಾಲಾಗಿ ಬೆಳೆದು ನಾಡಿನಲ್ಲೆಲ್ಲ ವಿಶಾಲವ್ಯಾಪ್ತಿಯದಾಯಿತು.

ಶ್ರೀ ಧರ್ಮಸ್ಥಳದ ಹೆಗ್ಗಡೆಯವರು ಜೈನ ಧರ್ಮದವರು; ಅವರಿಗೂ ಕ್ಷೇತ್ರದ ನಿಯಮತತ್ವಕ್ಕೂ ಏನು ಸಂಬಂಧವೆಂಬ ಶಂಕೆ ಕೆಲವರಿಗೆ ಇದೆ. ಇದಕ್ಕೆ ಉತ್ತರ ಒಂದೇ—ಇದೊಂದು ಪ್ರಪಂಚ ನಿಯಮಕ್ಕೆ ಸಂಬಂಧಿಸಿದ ದೈವರಹಸ್ಯ. ಇದೊಂದು ದೊಡ್ಡ ಅತಿಶಯವೇ. ಸದ್ಯ ಈ ಜ್ಞಾನಯಜ್ಞಕ್ಕೆ ಇದು ಮುಖ್ಯ ಪ್ರಯೋಜನವನ್ನು ಒದಗಿಸುತ್ತಿದೆ. ಇಲ್ಲಿ ವಿಭಿನ್ನ ಮತಗಳ ಏಕೀಕರಣವಾಗಿದೆ ಎಂದೊಪ್ಪುವಾಗ ಪರ್ಯವಸಾನದಲ್ಲಿ ವಿಶೇಷ ಅರ್ಥದಲ್ಲಿ ಪ್ರಪಂಚದ ಧರ್ಮಗಳ ಏಕೀಭಾವವೇ ಪ್ರಪಂಚ ತತ್ವವಾಗುವುದು ಎಂದೂ ಸಿದ್ಧಾಂತ ಮಾಡಿಕೊಳ್ಳಬಹುದು. ಪರಮ ತತ್ವವಾದ ಧರ್ಮಗಳ ಏಕೀಭಾವ, ಸಂಭಾವ್ಯ ಮತ್ತು ಸಾಧ್ಯ ಎಂಬುದಕ್ಕೆ ಶ್ರೀ ಮಂಜಯ್ಯ ಹೆಗ್ಗಡೆಯವರೇ ಮೂರ್ತಿವತ್ತಾದ ಉದಾಹರಣೆ.

ಶ್ರೀ। ಮಂಜಯ್ಯ ಹೆಗ್ಗಡೆಯವರ ಆಶ್ರಯದಲ್ಲಿ ನಡೆದ ಎಲ್ಲ ಸಮ್ಮೇಳನಾಧಿವೇಶನಗಳಲ್ಲಿ ಅಧ್ಯಕ್ಷಸ್ಥಾನಕ್ಕೆ ಆರಿಸಿ ಬಂದವರೆಲ್ಲ ಒಬ್ಬರಿಗಿಂತ ಒಬ್ಬರು ಮಹಾ ಸಮರ್ಥರೂ, ಜ್ಞಾನಸಂಪನ್ನರೂ, ಮೇಧಾವಿಗಳೂ ಆಗಿದ್ದರು. ದಿವಂಗತ ಶ್ರೀ। ಬಿ. ಎಂ. ಶ್ರೀಕಂಠಯ್ಯ ಶ್ರೀಗಳಾದ ವಿ. ಬಿ. ಆಲೂರು, ಆರ್. ನರಸಿಂಹಾಚಾರ್, ವಿ. ಸೀತಾರಾಮಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಸಿ. ಕೆ. ವೆಂಕಟರಾಮಯ್ಯ, ಕೆ. ಬಸವರಾಜ ಅರಸರು, ಎಚ್. ಎಸ್. ರಾಘವೇಂದ್ರ ಆಚಾರ್, ಶಿವರಾಮ ಕಾರಂತ ಇವರು ಹಾಗೆ ಅಧ್ಯಕ್ಷ ಸ್ಥಾನವನ್ನು ನಿರ್ವಹಿಸಿದ ವಿದ್ವನ್ಮಣಿಗಳಲ್ಲಿ ಕೆಲವರು.

ಈವೊತ್ತಿನ ರಜತೋತ್ಸವ ಶ್ರೀ। ಮಂಜಯ್ಯ ಹೆಗ್ಗಡೆ ಅವರ ಸ್ಥಾನದಲ್ಲಿರುವ ಶ್ರೀ। ಧರ್ಮಸ್ಥಳ ರತ್ನವರ್ಮ ಹೆಗ್ಗಡೆ ಅವರ ಸಮಕ್ಷಮದಲ್ಲಿ ನಡೆಯುತ್ತಿದೆ. ಈ ಸಮ್ಮೇಳನವನ್ನಾರಂಭಿಸಿ ೨೫ ಅಧಿವೇಶನಗಳಲ್ಲಿ, ೨೨ನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದ ಶ್ರೀ। ಮಂಜಯ್ಯ ಹೆಗ್ಗಡೆ ಅವರು ನಮಗಾಗಿ ಕೊಟ್ಟು ಹೋದ ಆ ಉತ್ತರಾಧಿಕಾರಿಗಳಾದ ಈಗಿನ ಹೆಗ್ಗಡೆಯವರಾದರೂ, ತಮ್ಮ ಹಿರಿಯರಿಗೆ ಸರಿಮಿಗಿಲೆನಿಸುವಂತೆ ಅವರಿಟ್ಟ ಹೆಜ್ಜೆಯಲ್ಲೇ ಮುಂದೆ ಸರಿದು ಈ ರಜತೋತ್ಸವ ಒಂದರಲ್ಲೇ ಅಲ್ಲ, ಕ್ಷೇತ್ರದ ಇತರ ಅಭಿವೃದ್ಧಿ ಕಾರ್ಯಗಳ ವಿಚಾರದಲ್ಲಿ ಕೂಡ ಮನಃಪೂರ್ವಕವಾಗಿ ಉತ್ಸಾಹದಿಂದ ಕಾರ್ಯ ಸಾಗಿಸುವ ಕರ್ತವ್ಯದಕ್ಷರೇ ಆಗಿದ್ದಾರೆ ಎನ್ನಬೇಕು.

ಈ ಬಾರಿಯಂತೂ ಮೈಸೂರು ಕೇರಳದ ಗವರ್ನರುಗಳು, ಬಿಹಾರಿನ ಹಿಂದಿನ ಗವರ್ನರರು, ಮೈಸೂರಿನ ಇಂದಿನ ಹಿಂದಿನ ಮುಖ್ಯ ಮಂತ್ರಿಗಳೇ ಮೊದಲಾದ ನಾಡಿನ ಮಹಾ ನಾಯಕ ಪ್ರಭೃತಿಗಳೊಡನೆ

ಕರ್ಣಾಟಕದ ಸುಪ್ರಸಿದ್ಧ ಸಾಹಿತಿಗಳೂ, ಖ್ಯಾತಿವೆತ್ತ ಸಂಗೀತ ಕಲಾವಿದರೂ ಈ ಉತ್ಸವದಲ್ಲಿ ಸಮಾವೇಶಗೊಂಡು ಭಾಗ ವಹಿಸುವುದು ಕನ್ನಡ ನಾಡಿಗೊಂದು ಚಿರಸ್ಮರಣೀಯವಾದ ಹೆಮ್ಮೆಯ ವಿಷಯವೇ ಆಗಿದೆ.

ಇದುವರೆಗಿನ ಅಧಿವೇಶನಗಳಲ್ಲಿ ಧರ್ಮ ಜಾಗ್ರತಿಯನ್ನು ಉಂಟುಮಾಡಲು ಧರ್ಮೋಪದೇಶ ಮಾಡಿ ಜ್ಞಾನ ದಾಹ ತಣಿಸಿದ ನೂರಾರು ಮಂದಿ ವೇದಾಂತಿಗಳಲ್ಲಿ ವಿದ್ವಾಂಸರಲ್ಲಿ ಸಾಹಿತಿಗಳಲ್ಲಿ ಕೆಲವರು ಈಗಿಲ್ಲ. ಅವರ ಆ ಮಹೋಪಕಾರವು ಈ ಸಂದರ್ಭದಲ್ಲಿ ಗಣನೀಯವಾಗಿದೆ.

ಈ ಸಮ್ಮೇಳನದ ಪ್ರಥಮಾಧಿವೇಶನದಲ್ಲಿ ಕೃಷಿ ಕಲಾ ಚಿಕಿತ್ಸಾ ದ್ರವ್ಯಗಳದೊಂದು ಉತ್ತಮ ವಸ್ತು ಪ್ರದರ್ಶನವೊಂದು ನಡೆದಿತ್ತು. ಅನಂತರ ಅದು ನಡೆದಿಲ್ಲ. ಈ ಬಾರಿ ಆ ಕಾರ್ಯಕ್ರಮದ ಏರ್ಪಾಡಿರುವುದು ಸರ್ವ ಶ್ಲಾಘ್ಯ.





# HISTORY OF SHRI DHARMASTHALA.

## Where is Dharmasthala ?

Shri Dharmasthala which is one of the famous sacred places in South India is well known to all pious people. It is situate in the village of Dharmasthala, in Beltangady Taluk of South Kanara District. On the Mangalore Charmady road 40 miles from Mangalore and 20 miles from Charmady lies a place called Ujre. From Ujre a road branches off to Shri Dharmasthala five and a half miles away. Pilgrims from Mysore could reach this place by one of four roadways: through Moodagere down the Charmady ghat road, or down the Agumbe ghat road through Someshwar and Karkala, or from Coondapoor along the Udipi—Karkala road, or from Sakaleshpur down the Shiradi ghat road via Uppinangady to Ujre. As the river at Uppinangady is unfordable for cars, would have to detour to Ujre via Bantwal. From Coorg the access is via Puttur, either across the river at Uppinangady or via Bantwal. Four and half miles from Ujre flows the Netravathi river, which born on the Crest of Kudremukh hill of Western Ghat range flows through Uppinangady and Panemangalore to join the sea at Mangalore. Pilgrims to Shri Dharmastala bathe at this river on the way before proceeding to this sacred place because its waters are used for Tirtha at Shri Dharmasthala. The sacred place is one and a half miles distant south of this river and is girt by similar riverlets on its other three sides. The population of this village is 1400, and the number of houses 200, according to the 1941 census figures. Of these inhabitants nearly 800 live round about the temple; and nearly 40 per cent are literate. The climate of this place is hot in summer and pleasantly warm during the rainy season. The sacred place has a picturesque fringe of hills, fields and areca and cocoanut gardens, and not far away there is enchanting woodland scenery. Hills like Jayakeerthi Betta or Shivarathri Betta and Badinade Betta lie very near the temple itself.

## The birth of the place

What they call Dharmasthala now used to be known as KUDUM before *i. e.*, KODU+MA or the place where you are given DANA or GIFT. About a thousand years ago there lived one Barmanna Pergade with his wife Ammudevi Ballalthi in the residence called Nelyadibeedu. Nearby there was the Chandra-

